## ಕರ್ನಾಟಕ ಸರ್ಕಾರ

ಸಂಖ್ಯೆ: ಟಿಓಆರ್ 243 ಟಿಡಿವಿ 2020

ಕರ್ನಾಟಕ ಸರ್ಕಾರದ ಸಚಿವಾಲಯ,
ವಿಧಾನಸೌಧ,
ಬೆಂಗಳೂರು, ದಿನಾಂಕ: 07.12.2020.

US
41
8/12/20

ಇವರಿಂದ,
ಸರ್ಕಾರದ ಪ್ರಧಾನ ಕಾರ್ಯದರ್ಶಿ,
ಪ್ರವಾಸೋದ್ಯಮ ಇಲಾಖೆ
ವಿಕಾಸಸೌಧ, ಬೆಂಗಳೂರು,

ಇವರಿಗೆ,
ಕಾರ್ಯದರ್ಶಿಗಳು,
ಕರ್ನಾಟಕ ವಿಧಾನ ಸಭೆ
ವಿಧಾನಸೌಧ, ಬೆಂಗಳೂರು.

ಮಾನ್ಯರೆ,

ವಿಷಯ: ಮಾನ್ಯ ವಿಧಾನ ಸಭೆಯ ಸದಸ್ಯರಾದ ಶ್ರೀ. ಬೆಳ್ಳಿಪ್ರಕಾಶ್ (ಕಡೂರು) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 281ಕ್ಕೆ ಉತ್ತರ.

ಉಲ್ಲೇಖ: ಕಾರ್ಯದರ್ಶಿ, ಕರ್ನಾಟಕ ವಿಧಾನ ಸಭೆ ಸಚಿವಾಲಯ, ಇವರ ಪತ್ರ ಸಂಖ್ಯೆ: ಪ್ರಶಾವಿಸ/15ನೇವಿಸ/8ಅ/ಪ್ರ.ಸಂ.281/2020, ದಿನಾಂಕ: 30.11.2020.

*****

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, **ಶ್ರೀ. ಬೆಳ್ಳಿಪ್ರಕಾಶ್ (ಕಡೂರು) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 281ಕ್ಕೆ** ಉತ್ತರದ 25 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ ಮುಂದಿನ ಕ್ರಮಕ್ಕಾಗಿ ಕಳುಹಿಸಲು ನಿರ್ದೇಶಿಸಲ್ಪಟ್ಟಿದ್ದೇನೆ.

ತಮ್ಮ ವಿಶ್ವಾಸಿ,

07.12.2020

**(ಆರ್. ರಾಜಶೇಖರ್)**
ಸರ್ಕಾರದ ಅಧೀನ ಕಾರ್ಯದರ್ಶಿ
ಪ್ರವಾಸೋದ್ಯಮ ಇಲಾಖೆ

# ಕರ್ನಾಟಕ ವಿಧಾನಸಭೆ

**ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ** : 281

**ಮಾನ್ಯ ಸದಸ್ಯರ ಹೆಸರು** : ಶ್ರೀ ಬೆಳ್ಳಿಪ್ರಕಾಶ್ (ಕಡೂರು)

**ವಿಷಯ** : 'ಪ್ರವಾಸಿ ತಾಣಗಳ ಅಭಿವೃದ್ಧಿ'

**ಉತ್ತರಿಸುವ ದಿನಾಂಕ** : 08.12.2020

**ಉತ್ತರಿಸುವವರು** : ಮುಖ್ಯ ಮಂತ್ರಿ

*****

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಚಿಕ್ಕಮಗಳೂರು ಜಿಲ್ಲೆಗೆ ಪ್ರವಾಸೋದ್ಯಮ ಇಲಾಖೆಯಿಂದ ಬಿಡುಗಡೆ ಮಾಡಿರುವ ಅನುದಾನವೆಷ್ಟು; (ಕ್ಷೇತ್ರವಾರು ವಿವರ ನೀಡುವುದು) | ಚಿಕ್ಕಮಗಳೂರು ಜಿಲ್ಲೆಗೆ ಪ್ರವಾಸೋದ್ಯಮ ಇಲಾಖೆಯಿಂದ 2009-10ನೇ ಸಾಲಿನಿಂದ 2019-20ನೇ ಸಾಲಿನವರೆಗೆ ಬಂಡವಾಳ ವೆಚ್ಚ ಲೆಕ್ಕಶೀರ್ಷಿಕೆಯಡಿ ರೂ.8030.18 ಲಕ್ಷಗಳು ಮತ್ತು ಕೆ.ಟಿ.ವಿ.ಜಿ. ಲೆಕ್ಕಶೀರ್ಷಿಕೆಯಡಿ ರೂ.2500.00 ಲಕ್ಷಗಳು ಒಟ್ಟಾರೆ ರೂ.10530.18 ಲಕ್ಷಗಳನ್ನು ಬಿಡುಗಡೆ ಮಾಡಲಾಗಿದೆ.<br><br>ತಾಲ್ಲೂಕುವಾರು ವಿವರ ಅನುಬಂಧ-1 ಮತ್ತು 2ರಲ್ಲಿರಿಸಿದೆ. |
| ಆ) | ಕಡೂರು ಮತ ಕ್ಷೇತ್ರಕ್ಕೆ ಬಿಡುಗಡೆ ಮಾಡಿರುವ ಅನುದಾನವೆಷ್ಟು? | ಮತ ಕ್ಷೇತ್ರದ ಆಧಾರದ ಮೇಲೆ ಅನುದಾನ ಬಿಡುಗಡೆಗೊಳಿಸಲಾಗುವುದಿಲ್ಲ. ಪ್ರವಾಸಿ ತಾಣಗಳ ಅಭಿವೃದ್ಧಿಗೆ ಅಗತ್ಯತೆಗೆ ಅನುಸಾರವಾಗಿ ಅನುದಾನ ಬಿಡುಗಡೆಗೊಳಿಸಲಾಗುವುದು.<br><br>ಕಡೂರು ತಾಲ್ಲೂಕಿಗೆ ಬಂಡವಾಳ ವೆಚ್ಚ ಮತ್ತು ಕೆ.ಟಿ.ವಿ.ಜಿ. ಲೆಕ್ಕಶೀರ್ಷಿಕೆಗಳಡಿಯಲ್ಲಿ ರೂ.1681.36 ಲಕ್ಷಗಳನ್ನು ಬಿಡುಗಡೆ ಮಾಡಲಾಗಿದೆ. |
| ಇ) | ಚಿಕ್ಕಮಗಳೂರು ಜಿಲ್ಲೆಯಲ್ಲಿ ಪ್ರವಾಸೋದ್ಯಮ ಇಲಾಖೆಯಿಂದ ಯಾವ ಯಾವ ಪ್ರವಾಸಿ ತಾಣಗಳನ್ನು ಗುರುತಿಸಲಾಗಿದೆ; (ಕ್ಷೇತ್ರವಾರು ಮಾಹಿತಿ ನೀಡುವುದು) | ಚಿಕ್ಕಮಗಳೂರು ಜಿಲ್ಲೆಯಲ್ಲಿ ಪ್ರವಾಸೋದ್ಯಮ ಇಲಾಖೆಯಿಂದ ಗುರುತಿಸಿರುವ ತಾಲ್ಲೂಕುವಾರು ಪ್ರವಾಸಿ ತಾಣಗಳ ವಿವರ ಕೆಳಗಿನಂತಿದೆ. |
| ಈ) | ಕಡೂರು ತಾಲ್ಲೂಕಿನ ಪ್ರವಾಸಿ ತಾಣಗಳ ಅಭಿವೃದ್ಧಿಗೆ ಬಿಡುಗಡೆಯಾದ ಅನುದಾನವೆಷ್ಟು? (ಮಾಹಿತಿ ನೀಡುವುದು) | ಕಡೂರು ತಾಲ್ಲೂಕಿಗೆ ಬಂಡವಾಳ ವೆಚ್ಚ ಮತ್ತು ಕೆ.ಟಿ.ವಿ.ಜಿ. ಲೆಕ್ಕಶೀರ್ಷಿಕೆಗಳಡಿಯಲ್ಲಿ ರೂ.1681.36 ಲಕ್ಷಗಳನ್ನು ಬಿಡುಗಡೆ ಮಾಡಲಾಗಿದೆ.<br><br>ತಾಲ್ಲೂಕುವಾರು ವಿವರವನ್ನು ಅನುಬಂಧ-3ರಲ್ಲಿರಿಸಿದೆ. |

(ಇ) ಉತ್ತರದಲ್ಲಿನ ಪಟ್ಟಿ:

| ತಾಲ್ಲೂಕು | ಪ್ರವಾಸಿ ತಾಣ |
|---|---|
| ಚಿಕ್ಕಮಗಳೂರು | ಮುಳ್ಳಯ್ಯನಗಿರಿ, ಬಾಬಾಬುಡನ್ಗಿರಿ, ಹಿರೇಮಗಳೂರು, ಮುತ್ತೋಡಿ ಆಟದ ಉದ್ಯಾನ, ಬೆಳವಾಡಿ |
| ಕಡೂರು | ಅಯ್ಯನಕೆರೆ |
| ಕೊಪ್ಪ | ಹಿರೇಕೂಡಿಗೆ |
| ಮೂಡಿಗೆರೆ | ಕಳಸ, ಹೊರನಾಡು, ಕುದುರೆಮುಖ, ಅಂಗಡಿ, ಬಲ್ಲಾಳರಾಯನದುರ್ಗ |
| ಶೃಂಗೇರಿ | ಶೃಂಗೇರಿ, ಕಿಗ್ಗ |
| ತರೀಕೆರೆ | ಕೆಮ್ಮಣ್ಣುಗುಂಡಿ, ಅಮೃತಪುರ ಭದ್ರ ಯೋಜನೆ |

ಸಂಖ್ಯೆ: ಟಿಒಆರ್ 243 ಟಿಡಿವಿ 2020

(ಬಿ.ಎಸ್. ಯಡಿಯೂರಪ್ಪ)
ಮುಖ್ಯ ಮಂತ್ರಿ.

# ಅನುಬಂಧ-1

## ಚಿಕ್ಕಮಗಳೂರು ಜಿಲ್ಲೆಯ ಪ್ರವಾಸಿ ತಾಣಗಳ ಅಭಿವೃದ್ಧಿಗಾಗಿ ಬಂಡವಾಳ ವೆಚ್ಚಗಳ ಅಡಿ ಕೈಗೆತ್ತಿಕೊಂಡಿರುವ ಕಾಮಗಾರಿಗಳ ಹಾಗೂ ಅವುಗಳಿಗೆ ಬಿಡುಗಡೆ ಮಾಡಿರುವ ಅನುದಾನದ ತಾಲ್ಲೂಕುವಾರು ವಿವರ

(ರೂ.ಲಕ್ಷಗಳಲ್ಲಿ)

| ಕ್ರ ಸಂ. | ಕಾಮಗಾರಿಯ ಹೆಸರು | ಅಂದಾಜು ಮೊತ್ತ | ಅನುಷ್ಠಾನ ಸಂಸ್ಥೆ | ಈವರೆಗೂ ಬಿಡುಗಡೆ ಮಾಡಿರುವ ಅನುದಾನ |
|---|---|---|---|---|
| 1 | 2 | 3 | 4 | 5 |
| | **ಚಿಕ್ಕಮಗಳೂರು ಜಿಲ್ಲೆ.** | | | |
| | ನರಸಿಂಹರಾಜಪುರ ತಾಲ್ಲೂಕು | | | |
| 1 | ರಂಭಾಪುರಿ ಮಹಾಸಂಸ್ಥಾನ ಪ್ರದೇಶದಲ್ಲಿ ಫುಡ್ ಕೋರ್ಟ್, ಶೌಚಾಲಯ, 22 ರೂಮುಗಳ ಯಾತ್ರಿನಿವಾಸ, 4 ವಿ.ಐ.ಪಿ. ರೂಮು, ಕಿಚನ್ ಬ್ಲಾಕ್, ಪುಷ್ಕರಿಣಿ ನಿರ್ಮಾಣ ಹಾಗೂ ಪಾರ್ಕಿಂಗ್ ಸೌಲಭ್ಯಗಳ ಅಭಿವೃದ್ಧಿ | 395.48 | ನಿರ್ಮಿತಿ ಕೇಂದ್ರ | 359.53 |
| 2 | ಚಿಕ್ಕಮಗಳೂರು ಜಿಲ್ಲೆ ಎನ್.ಆರ್. ಪುರ ತಾಲ್ಲೂಕಿನ ಬಾಳೆಹೊನ್ನೂರು ಶ್ರೀ ಜಗದ್ಗುರು ರಂಭಾಪುರಿ ವೀರ ಸಿಂಹಾಸನ ಮಹಾಪೀಠದ ಬಳಿ ಯಾತ್ರಿನಿವಾಸ. (ಹೆಚ್ಚುವರಿ ಯಾತ್ರಿನಿವಾಸ ನಿರ್ಮಾಣ) | 50.00 | ಕೆಆರ್‌ಐಡಿಎಲ್ | 50.00 |
| | **ನರಸಿಂಹರಾಜಪುರ ತಾಲ್ಲೂಕು ಒಟ್ಟು** | **445.48** | | **409.53** |
| | **ತರೀಕೆರೆ ತಾಲ್ಲೂಕು** | | | |
| 3 | ಕೇಂದ್ರ ಸರ್ಕಾರವು OTACA ಅಡಿ ಒದಗಿಸಿರುವ ಅನುದಾನದಲ್ಲಿ ಚಿಕ್ಕಮಗಳೂರು ಜಿಲ್ಲೆಯ ಕೆಮ್ಮಣ್ಣುಗುಂಡಿ ಹಾಗೂ ನಂದಿ ಗಿರಿಧಾಮದಲ್ಲಿ ಕೈಗೊಂಡಿರುವ ಕಾಮಗಾರಿಗಳಿಗೆ ರಾಜ್ಯ ಸರ್ಕಾರದ ಪಾಲಿನ ಅನುದಾನ<br>ಕೆಮ್ಮಣ್ಣುಗುಂಡಿ<br>1. ಪಾರ್ಕಿಂಗ್ ಮತ್ತು ಇತರೆ ಸೌಲಭ್ಯ ರೂ.58.55<br>2. ಸಿವೆಜ್ ಟ್ರೀಟ್‌ಮೆಂಟ್ ಪ್ಲ್ಯಾಂಟ್ ರೂ.3.17<br>3. ಎಕ್ಸ್‌ಟರ್ನಲ್ ಎಲೆಕ್ಟ್ರಿಕಲ್ ವರ್ಕ್ ರೂ.9.16. 4. ಡಾರ್ಮಿಟರಿ ಬ್ಲಾಕ್/ ವುಡ್ ಹೌಸ್/ ಟೆಂಟೆಡ್ ಅಕಮೊಡೇಷನ್ ಉನ್ನತೀಕರಣ ರೂ.5.89<br>5. ವಿಶ್ವೇಶ್ವರಯ್ಯ ಬ್ಲಾಕ್ ರೆಸ್ಟೋರೆಂಟ್ ರೂ.88.44<br>6. ರಾಜಭವನ/ದತ್ತಾತ್ರೇಯ ಭವನ ರೂ.80.69.7. ವಿರುಪಾಕ್ಷ ಬ್ಲಾಕ್ ಕಾಮಗಾರಿ ರೂ.84.84<br>8. ದುಪ್ಪ ದಗಿರಿ ಬ್ಲಾಕ್ ರೂ.177.57<br>9. ಬುಡನಗಿರಿ ಬ್ಲಾಕ್ ರೂ.125.39<br>10. ಕಲ್ಲತ್ತಿ ನಾರಾಯಣ ಕುಟೀರ ರೂ.24.25<br>11. ಬಾಹ್ಯ ನೀರು ಸರಬರಾಜು ರೂ.95.20<br>12. ಗ್ರೀನ್ ಹೌಸ್ ಕಾಮಗಾರಿಗಳು ರೂ.274.98<br>13. ಕಾರಂಜಿ ಹಾಗೂ ಕಾಲುದಾರಿ ನಿರ್ಮಾಣ ರೂ.72.56 | 2356.92 | ಕೆಎಸ್ ಟಿಡಿಸಿ, ಜೆಎಲ್‌ಆರ್ & ಪಿಡಬ್ಲ್ಯೂಡಿ | 1978.50 |

(ರೂ.ಲಕ್ಷಗಳಲ್ಲಿ)

| ಕ್ರ ಸಂ. | ಕಾಮಗಾರಿಯ ಹೆಸರು | ಅಂದಾಜು ಮೊತ್ತ | ಅನುಷ್ಠಾನ ಸಂಸ್ಥೆ | ಈವರೆಗೂ ಬಿಡುಗಡೆ ಮಾಡಿರುವ ಅನುದಾನ |
|---|---|---|---|---|
| 1 | 2 | 3 | 4 | 5 |
| 4 | ತರೀಕೆರೆ ತಾಲ್ಲೂಕಿನ ಸೊಲ್ಲಾಪುರ ಶ್ರೀ ಗುರುಸಿದ್ದರಾಮೇಶ್ವರ ದೇವಸ್ಥಾನದ ಬಳಿ ಡಾರ್ಮಿಟರಿ, ಕಲ್ಲು ಬೆಂಚುಗಳು ಹಾಗೂ ಪಾರ್ಕಿಂಗ್ ಮುಂತಾದ ಸೌಲಭ್ಯಗಳ ಅಭಿವೃದ್ಧಿ | 80.00 | ಕೆಆರ್ಐಡಿಎಲ್ | 80.00 |
| 5 | ಚಿಕ್ಕಮಗಳೂರು ಜಿಲ್ಲೆಯ ತರೀಕೆರೆಯಲ್ಲಿ ಶಿವಶರಣೆ ಅಕ್ಕನಾಗಲಾಂಬಿಕೆ ಲಿಂಗೈಕ್ಯ ಕ್ಷೇತ್ರ ಇಲ್ಲಿ ಯಾತ್ರಿನಿವಾಸ ನಿರ್ಮಾಣ. | 85.00 | ನಿರ್ಮಿತಿ ಕೇಂದ್ರ | 42.50 |
| 6 | ತರೀಕೆರೆ ತಾಲ್ಲೂಕು ಕಲ್ಲತ್ತಗಿರಿ ಫಾಲ್ಸ್‌ಗೆ ಮೂಲಭೂತ ಸೌಕರ್ಯ. | 50.00 | ನಿರ್ಮಿತಿ ಕೇಂದ್ರ | 25.00 |
| 7 | ಚಿಕ್ಕಮಗಳೂರು ಜಿಲ್ಲೆಯ ತರೀಕೆರೆ ತಾಲ್ಲೂಕು ಸೊಲ್ಲಾಪುರ ಗ್ರಾಮದ ಶ್ರೀ ಸಿದ್ದರಾಮೇಶ್ವರ ದೇವಸ್ಥಾನದ ಹತ್ತಿರ ಯಾತ್ರಿನಿವಾಸ ಹಾಗೂ ಮೂಲಭೂತ ಸೌಕರ್ಯ ಅಭಿವೃದ್ಧಿ. | 100.00 | ನಿರ್ಮಿತಿ ಕೇಂದ್ರ | 50.00 |
| 8 | ತರೀಕೆರೆ ತಾಲ್ಲೂಕು ಅಜ್ಜಂಪುರ ಹೋಬಳಿ ಹಣ್ಣೆಗ್ರಾಮದ ಶ್ರೀ ಕ್ಷೇತ್ರ ಹಣ್ಣೆ ಮಠದ ಬಳಿ ಯಾತ್ರಿನಿವಾಸ ನಿರ್ಮಾಣ | 25.00 | ಕೆ.ಆರ್.ಐ.ಡಿ ಎಲ್ | 10.00 |
| | **ತರೀಕೆರೆ ತಾಲ್ಲೂಕು ಒಟ್ಟು** | **2696.92** | | **2186.00** |
| | **ಮೂಡಿಗೆರೆ ತಾಲ್ಲೂಕು** | | | |
| 9 | ಮೂಡಿಗೆರೆ ತಾಲ್ಲೂಕು, ಮೂಲರಹಳ್ಳಿಯಲ್ಲಿರುವ ಕಾಲಭೈರವೇಶ್ವರ ದೇವಾಲಯದ ಬಳಿ ಯಾತ್ರಿನಿವಾಸ ಹಾಗೂ ಮೂಲ ಸೌಲಭ್ಯಗಳ ಅಭಿವೃದ್ಧಿ | 49.95 | ಕೆ.ಆರ್.ಐ.ಡಿ ಎಲ್ | 37.46 |
| 10 | ಮೂಡಿಗೆರೆ ತಾಲ್ಲೂಕಿನ ಕೊಟ್ಟಿಗೆಹಾರ ಬಳಿ ನಿರ್ಮಿಸುತ್ತಿರುವ (ಮಲೆನಾಡು ಸರ್ಕ್ಯೂಟ್ ಯೋಜನೆ) ರಸ್ತೆ ಬದಿ ಸೌಲಭ್ಯ ಯೋಜನೆಗೆ ಹೆಚ್ಚುವರಿ ಅನುದಾನ ಮಂಜೂರು ಮಾಡುವ ಬಗ್ಗೆ | 181.75 | ಕೆ.ಆರ್.ಐ.ಡಿ ಎಲ್ | 122.75 |
| 11 | ಚಿಕ್ಕಮಗಳೂರು ಜಿಲ್ಲೆ ಪುರಾತನ ನಾಣ್ಯದ ಬೈರವೇಶ್ವರ ದೇವಸ್ಥಾನಕ್ಕೆ ಯಾತ್ರಿನಿವಾಸ ನಿರ್ಮಾಣ. | 50.00 | ಕೆ.ಆರ್.ಐ.ಡಿ ಎಲ್ | 37.50 |
| 12 | ಚಿಕ್ಕಮಗಳೂರು ಜಿಲ್ಲೆ, ಮೂಡಿಗೆರೆ ತಾಲ್ಲೂಕು ಊರುಬಗೆ ಗ್ರಾಮ ಪಂಚಾಯ್ತಿಯ ಬೈರಾಪುರ ಗ್ರಾಮದ ಶ್ರೀ ನಾಣ್ಯಭೈರವೇಶ್ವರ ದೇವಸ್ಥಾನದ ಹತ್ತಿರ ಪ್ರವಾಸಿ ಸೌಲಭ್ಯ | 25.00 | ಕೆ.ಆರ್.ಐ.ಡಿ ಎಲ್ | 25.00 |
| 13 | ಮೂಡಗೆರೆ ಕ್ಷೇತ್ರದ ತೋರಣಮಾವು-ಪುರ ಗ್ರಾಮದಲ್ಲಿರುವ ಗೌತಮೇಶ್ವರ ದೇವಸ್ಥಾನಕ್ಕೆ ಮೂಲಭೂತ ಸೌಕರ್ಯ ಕಲ್ಪಿಸಿ, ಪ್ರವಾಸಿ | 100.00 | ಪುರಾತತ್ವ ಸಂಗಹಾಲಯಗಳು | 50.00 |

(ರೂ.ಲಕ್ಷಗಳಲ್ಲಿ)

| ಕ್ರ ಸಂ. | ಕಾಮಗಾರಿಯ ಹೆಸರು | ಅಂದಾಜು ಮೊತ್ತ | ಅನುಷ್ಠಾನ ಸಂಸ್ಥೆ | ಈವರೆಗೂ ಬಿಡುಗಡೆ ಮಾಡಿರುವ ಅನುದಾನ |
|---|---|---|---|---|
| 1 | 2 | 3 | 4 | 5 |
| 14 | ಮೂಡಗೆರೆ ವಿಧಾನಸಭಾ ಕ್ಷೇತ್ರದ ಹಾಂದಿ-ಬಸ್ಕಲ್ ರಸ್ತೆ ಅಭಿವೃದ್ಧಿ (ಬೇಲೂರಿಗೆ ಸಂಪರ್ಕ ರಸ್ತೆ) | 40.00 | ಲೋಕೋಪಯೋಗಿ ಇಲಾಖೆ | 40.00 |
| 15 | ಮೂಡಗೆರೆ ವಿಧಾನಸಭಾ ಕ್ಷೇತ್ರದ ಹಾಂದಿ-ಮಾಕೋನಹಳ್ಳಿ ರಸ್ತೆ ಅಭಿವೃದ್ಧಿ (ಬೇಲೂರಿಗೆ ಸಂಪರ್ಕ ರಸ್ತೆ) | 40.00 | ಲೋಕೋಪಯೋಗಿ ಇಲಾಖೆ | 30.00 |
| 16 | ಮೂಡಗೆರೆ ತಾಲ್ಲೂಕು ಗೋಣಿಬೀಡು ಅಗ್ರಹಾರ ರಸ್ತೆ ಅಭಿವೃದ್ಧಿ ಮತ್ತು ಮೂಲಭೂತ ಸೌಕರ್ಯ. | 100.00 | ಲೋಕೋಪಯೋಗಿ ಇಲಾಖೆ | 99.66 |
| 17 | ಮೂಡಗೆರೆ ತಾಲ್ಲೂಕು ಬಲ್ಲಾಳ ರಾಯನದುರ್ಗದ ರಸ್ತೆ ಅಭಿವೃದ್ಧಿ ಮತ್ತು ಮೂಲಭೂತ ಸೌಕರ್ಯ. | 100.00 | ಲೋಕೋಪಯೋಗಿ ಇಲಾಖೆ | 75.00 |
| 18 | ಮೂಡಗೆರೆ ಕ್ಷೇತ್ರದ ಐತಿಹಾಸಿಕ ಮರ್ಲೆ ದೇವಸ್ಥಾನಕ್ಕೆ ಮೂಲಭೂತ ಸೌಕರ್ಯ ಅಭಿವೃದ್ಧಿ. | 50.00 | ಪುರಾತತ್ವ ಸಂಗ್ರಹಾಲಯಗಳು | 25.00 |
| 19 | ಮೂಡಗೆರೆ ಕ್ಷೇತ್ರದ ಐತಿಹಾಸಿಕ ಅಂಗಡಿ ಗ್ರಾಮದ ಕೆರೆ ಅಭಿವೃದ್ಧಿಪಡಿಸಿ ಪ್ರವಾಸಿ ಕೇಂದ್ರವನ್ನಾಗಿ ರೂಪಿಸುವ ಕಾಮಗಾರಿ. | 50.00 | ಲೋಕೋಪಯೋಗಿ ಇಲಾಖೆ | 37.50 |
| 20 | ಮೂಡಗೆರೆ ಕ್ಷೇತ್ರದ ಐತಿಹಾಸಿಕ ದೇವರಮನೆ ಕೆರೆ ಅಭಿವೃದ್ಧಿಪಡಿಸಿ ಪ್ರವಾಸಿ ಕೇಂದ್ರವನ್ನಾಗಿ ರೂಪಿಸುವ ಕಾಮಗಾರಿ. | 50.00 | ಲೋಕೋಪಯೋಗಿ ಇಲಾಖೆ | 37.50 |
| 21 | ಮೂಡಗೆರೆ ಕ್ಷೇತ್ರದ ಹಂಗರವಳ್ಳಿ-ಹಾರ್ಜಿಹಳ್ಳಿ ರಸ್ತೆ ಅಭಿವೃದ್ಧಿ (ಶೃಂಗೇರಿ-ಮುತ್ತೋಡಿ ಅಭಿಯಾರಣ್ಯ ಸಂಪರ್ಕ ರಸ್ತೆ) ಆಯ್ದ ಭಾಗಗಳಲ್ಲಿ ಕಾಂಕ್ರೀಟ್ ರಸ್ತೆ ಹಾಗೂ ಡ್ರೈನೇಜ್ ನಿರ್ಮಾಣ. | 200.00 | ಲೋಕೋಪಯೋಗಿ ಇಲಾಖೆ | 194.75 |
| 22 | ಮೂಡಿಗೆರೆ ತಾಲ್ಲೂಕು, ಬೈರಪುರ ಗ್ರಾಮದ ಚೋಳರ ಕಾಲದ ನಾಣ್ಯದ ಭೈರವೇಶ್ವರ ದೇವಸ್ಥಾನಕ್ಕೆ ಹೋಗುವ ರಸ್ತೆ ಅಭಿವೃದ್ಧಿ. | 30.00 | ಕೆಟಿಐಎಲ್/ ಲೋಕೋಪಯೋಗಿ ಇಲಾಖೆ | 30.00 |
| 23 | ಮೂಡಿಗೆರೆ ತಾಲ್ಲೂಕು, ಅಂಗಡಿ ಗ್ರಾಮ ಹೊಯ್ಸಳರ ಮೂಲ ಸಂಸ್ಥಾನ ವಸಂತ ಪರಮೇಶ್ವರಿ ದೇವಸ್ಥಾನಕ್ಕೆ ಹೋಗುವ ರಸ್ತೆ ಅಭಿವೃದ್ಧಿ | 25.00 | ಕೆಟಿಐಎಲ್/ ಲೋಕೋಪಯೋಗಿ ಇಲಾಖೆ | 25.00 |
| | **ಮೂಡಿಗೆರೆ ತಾಲ್ಲೂಕು ಒಟ್ಟು** | 1091.70 | | 867.12 |
| | **ಚಿಕ್ಕಮಗಳೂರು ತಾಲ್ಲೂಕು** | | | |
| 24 | ಚಿಕ್ಕಮಗಳೂರು ಜಿಲ್ಲೆ, ಅಂಬಳೆ ಹೋಬಳಿ, ರಾಮನಹಳ್ಳಿ ಗ್ರಾಮದ ಶ್ರೀ ಗಂಜಿಗೆರೆ ರಾಮೇಶ್ವರ ದೇವಸ್ಥಾನದ ಬಳಿ ಯಾತ್ರಿನಿವಾಸ ನಿರ್ಮಾಣ. | 40.00 | ನಿರ್ಮಿತಿ ಕೇಂದ್ರ | 25.00 |
| 25 | ಚಿಕ್ಕಮಗಳೂರು ತಾಲ್ಲೂಕು, ರಾಮನಹಳ್ಳಿ (ಮರ್ಲೆ ಅಂಚೆ)ಗ್ರಾಮದ ಶ್ರೀ ಗಂಜಿಗೆರೆ ರಾಮೇಶ್ವರ ದೇವಸ್ಥಾನದ ಬಳಿ ಯಾತ್ರಿನಿವಾಸ ನಿರ್ಮಾಣ | 25.00 | ಕೆಆರ್ಐಡಿಎಲ್ | 18.75 |

(ರೂ.ಲಕ್ಷಗಳಲ್ಲಿ)

| ಕ್ರ ಸಂ. | ಕಾಮಗಾರಿಯ ಹೆಸರು | ಅಂದಾಜು ಮೊತ್ತ | ಅನುಷ್ಠಾನ ಸಂಸ್ಥೆ | ಈವರೆಗೂ ಬಿಡುಗಡೆ ಮಾಡಿರುವ ಅನುದಾನ |
|---|---|---|---|---|
| 1 | 2 | 3 | 4 | 5 |
| 26 | ಚಿಕ್ಕಮಗಳೂರು ತಾಲ್ಲೂಕಿನ ಆಣೂರು–ಕಲ್ಲುಗುಡ್ಡೆ–ರಂಗನಬೆಟ್ಟ ದೇವಸ್ಥಾನಕ್ಕೆ ಸಂಪರ್ಕಿಸುವ ರಸ್ತೆ ಅಭಿವೃದ್ಧಿ ಕಾಮಗಾರಿ. | 110.00 | ಲೋಕೋಪಯೋಗಿ ಇಲಾಖೆ | 82.50 |
| 27 | ಚಿಕ್ಕಮಗಳೂರು ತಾಲ್ಲೂಕು, ಕಸಬಾ ಹೋಬಳಿ, ಮಲ್ಲೇನಹಳ್ಳಿಯಿಂದ ದೇವಿರಮ್ಮ ದೇವಸ್ಥಾನಕ್ಕೆ ಹೋಗುವ ರಸ್ತೆಯನ್ನು ಸಿ.ಸಿ ರಸ್ತೆ ನಿರ್ಮಾ, ಮೆಟ್ಟಿಲು ನಿರ್ಮಾಣ ಹಾಗೂ ರಕ್ಷಣಾ ರೇಲಿಂಗ್ಸ್ ಅಳವಡಿಸುವುದು ಹಾಗೂ ಸಂಪರ್ಕ ರಸ್ತೆ ಡಾಂಬರೀಕರಣ. | 400.00 | ಲೋಕೋಪಯೋಗಿ ಇಲಾಖೆ | 133.00 |
| 28 | ಚಿಕ್ಕಮಗಳೂರಿನ ದೋಣಿಕಣದಲ್ಲಿರುವ ಶ್ರೀ ಕೊಲ್ಲಾಪುರದಮ್ಮ ದೇವಸ್ಥಾನದ ಬಳಿ ಮೂಲಭೂತ ಸೌಕರ್ಯ ಕಾಮಗಾರಿ ಹಾಗೂ ಯಾತ್ರಿನಿವಾಸ ನಿರ್ಮಾಣ. (ಸರ್ಕಾರದ ತಿದ್ದುಪಡಿ ಆದೇಶ ಸಂಖ್ಯೆ: TOR/22/TDP/2020, ದಿನಾಂಕ: 29/01/2020) | 80.00 | ನಿರ್ಮಿತಿ ಕೇಂದ್ರ | 40.00 |
| 29 | ಚಿಕ್ಕಮಗಳೂರು ತಾ.ಹೊನ್ನಮ್ಮನ ಹಳ್ಳ ಫಾಲ್ಸ್‌ಗೆ ಮೂಲಭೂತ ಸೌಕರ್ಯ. | 50.00 | ನಿರ್ಮಿತಿ ಕೇಂದ್ರ | 25.00 |
| 30 | ಸೀತಾಳಯ್ಯನಗಿರಿ ಬೆಟ್ಟಕ್ಕೆ ಮೂಲಭೂತ ಸೌಕರ್ಯ. | 100.00 | ಲೋಕೋಪಯೋಗಿ ಇಲಾಖೆ | 75.00 |
| 31 | ಚಿಕ್ಕಮಗಳೂರು ತಾ. ಗಾಳಿಹಳ್ಳಿ ವೀರಭದ್ರೇಶ್ವರ ಭದ್ರಕಾಳಿ ಬನದ ರಸ್ತೆ ಅಭಿವೃದ್ಧಿ. | 150.00 | ಲೋಕೋಪಯೋಗಿ ಇಲಾಖೆ | 147.58 |
| 32 | ಚಿಕ್ಕಮಗಳೂರು ತಾ. ಮೂಗ್ತಿಹಳ್ಳಿ ಕೆರೆ ಅಭಿವೃದ್ಧಿ. | 150.00 | ಕೆಆರ್‌ಐಡಿಎಲ್ | 112.50 |
| 33 | ಚಿಕ್ಕಮಗಳೂರು ತಾಲ್ಲೂಕಿನ ಹುಲ್ಲಿಕೆರೆ ದೊಡ್ಡಮಠಕ್ಕೆ ಮೂಲಭೂತ ಸೌಕರ್ಯ ಅಭಿವೃದ್ಧಿ. | 25.00 | ನಿರ್ಮಿತಿ ಕೇಂದ್ರ | 12.50 |
| 34 | ಮೂಡಗೆರೆ ಕ್ಷೇತ್ರದ ಆರದವಳ್ಳಿ ಶಂಕರದೇವರ ಮಠಕ್ಕೆ ಮೂಲಭೂತ ಸೌಕರ್ಯ ಅಭಿವೃದ್ಧಿ. | 25.00 | ನಿರ್ಮಿತಿ ಕೇಂದ್ರ | 12.50 |
| 35 | ಚಿಕ್ಕಮಗಳೂರು ತಾಲ್ಲೂಕು ಲಕ್ಯಾ ಹೋಬಳಿ ಕರಡಿ ಗವಿಮಠಕ್ಕೆ ಯಾತ್ರಿನಿವಾಸ ನಿರ್ಮಾಣ. | 25.00 | ನಿರ್ಮಿತಿ ಕೇಂದ್ರ | 12.50 |
| 36 | ಚಂದ್ರದ್ರೋಣ ಪರ್ವತದ ಕವಿಕಲ್‌ಗಂಡಿಯಲ್ಲಿ ವೀಕ್ಷಣಾ ಗೋಪುರ ನಿರ್ಮಾಣ, ಪೌರಾಣಿಕ ಹಿನ್ನಲೆ ಬಿಂಬಿಸುವ ವಾತಾವರಣ ಸೃಷ್ಟಿಸುವುದು. | 50.00 | ನಿರ್ಮಿತಿ ಕೇಂದ್ರ | 25.00 |
| 37 | ಹಿರೇಮಗಳೂರು ಕಲ್ಯಾಣಿ ಹತ್ತಿರವಿರುವ ಕೋದಂಡರಾಮಸ್ವಾಮಿ ದೇವಸ್ಥಾನದ ಬಳಿ ಯಾತ್ರಿನಿವಾಸ ಹಾಗೂ ಪ್ರವಾಸಿ ಮೂಲಭೂತ ಸೌಕರ್ಯಗಳ ಕಾಮಗಾರಿ. | 200.00 | ನಿರ್ಮಿತಿ ಕೇಂದ್ರ | 100.00 |

(ರೂ.ಲಕ್ಷಗಳಲ್ಲಿ)

| ಕ್ರ ಸಂ. | ಕಾಮಗಾರಿಯ ಹೆಸರು | ಅಂದಾಜು ಮೊತ್ತ | ಅನುಷ್ಠಾನ ಸಂಸ್ಥೆ | ಈವರೆಗೂ ಬಿಡುಗಡೆ ಮಾಡಿರುವ ಅನುದಾನ |
|---|---|---|---|---|
| 1 | 2 | 3 | 4 | 5 |
| 38 | ಕುಮಾರಗಿರಿ ಕ್ಷೇತ್ರದಲ್ಲಿ ಯಾತ್ರಿನಿವಾಸ **ನಿರ್ಮಾಣ.** | 25.00 | ನಿರ್ಮಿತಿ ಕೇಂದ್ರ | **12.50** |
| 39 | ಚಿಕ್ಕಮಗಳೂರು ತಾಲ್ಲೂಕು ಗಾಳಿಗೆರೆ **ಭೀಮಗಧಾ** ತೀರ್ಥದ ಸೌಂದರ್ಯೀಕರಣ, ವೀಕ್ಷಣಾ ಗೋಪುರ ನಿರ್ಮಾಣ, ತಡೆಗೋಡೆ ನಿರ್ಮಾಣ, ಕಲ್ಲಿನ ಬೆಂಚು, ಪಾಂಡವರ ವನವಾಸ ನೆನಪಿಸುವ ಶಿಲ್ಪಗಳ ನಿರ್ಮಾಣ. | 200.00 | ನಿರ್ಮಿತಿ ಕೇಂದ್ರ | 225.00 |
| 40 | ಚಿಕ್ಕಮಗಳೂರು ತಾಲ್ಲೂಕು ಗಾಳಿಗೆರೆ ಭೀಮಗಧಾ ತೀರ್ಥದ ರಸ್ತೆ ಕಾಮಗಾರಿ. | 100.00 | ಲೋಕೋಪಯೋಗಿ ಇಲಾಖೆ | |
| 41 | ಕಲ್ಯಾಣನಗರದ ಪತಂಜಲಿ ಯೋಗಭವನ ಮುಂದುವರೆದ ಕಾಮಗಾರಿ. | 100.00 | ನಿರ್ಮಿತಿ ಕೇಂದ್ರ | 50.00 |
| 42 | ತೇಗೂರು ರಸ್ತೆಯಲ್ಲಿರುವ ಅರಸು ಸಮುದಾಯ ಭವನಕ್ಕೆ ಹೊಂದಿಕೊಂಡಂತೆ ಯಾತ್ರಿನಿವಾಸ ನಿರ್ಮಾಣ. | 75.00 | ನಿರ್ಮಿತಿ ಕೇಂದ್ರ | 37.50 |
| 43 | ಈಶ್ವರಹಳ್ಳಿಗೇಟಿನಿಂದ ಹಳೇಬೀಡುವರೆಗಿನ ರಸ್ತೆ ಅಭಿವೃದ್ಧಿ ಕಾಮಗಾರಿ. | 300.00 | ಲೋಕೋಪಯೋಗಿ ಇಲಾಖೆ | 225.00 |
| 44 | ಹುಲಿಕೆರೆಯಿಂದ ಕರಡಿಗವಿಮಠ ಸೇರುವ ರಸ್ತೆ ಅಭಿವೃದ್ಧಿ | 200.00 | ಲೋಕೋಪಯೋಗಿ ಇಲಾಖೆ | 197.84 |
| 45 | ಚಿಕ್ಕಮಗಳೂರು ನೆತ್ತಿ ಚೌಕ-ಮೇಲಿನ ಹುಲುವತ್ತಿ, ಮುತ್ತೋಡಿ-ಕೊಳಗಾಮೆ ರಸ್ತೆ ಅಭಿವೃದ್ಧಿ. **(ಸರ್ಕಾರದ ತಿದ್ದುಪಡಿ ಆದೇಶ ಸಂಖ್ಯೆ:** TOR/196/TDP/2019, ದಿ: 28/11/2019) | 700.00 | ಲೋಕೋಪಯೋಗಿ ಇಲಾಖೆ | 525.00 |
| 46 | ಚಿಕ್ಕಮಗಳೂರು ನಗರದಲ್ಲಿರುವ ಎ.ಐ.ಟಿ. ಸರ್ಕಲ್ ಹನುಮಂತಪ್ಪ ಸರ್ಕಲ್ ಹಾಗೂ ಆಜಾದ್ ಪಾರ್ಕ್ ಸರ್ಕಲ್‌ಗಳಲ್ಲಿ ಪ್ರವಾಸಿಗರನ್ನು ಆಕರ್ಷಿಸಲು ಪೌರಾಣಿಕ ಐತಿಹಾಸಿಕ ಮತ್ತು ಸೌಂದರ್ಯೀಕರಣ ಹಾಗೂ ಜರ್ಮನ್ ಟೆಂಟ್ ನಿರ್ಮಾಣ (ಸರ್ಕಾರದ ತಿದ್ದುಪಡಿ ಆದೇಶ ಸಂಖ್ಯೆ: TOR/200/TDP/2019, ದಿ: 31/12/2019) | 170.00 | ಕೆಆರ್‌ಐಡಿಎಲ್ | 127.50 |
| 47 | ಚಿಕ್ಕಮಗಳೂರು ನಗರದಲ್ಲಿರುವ ಎನ್.ಎಮ್.ಸಿ. ಸರ್ಕಲ್, ಬೋಳಾ ರಾಮೇಶ್ವರ ಟೆಂಪಲ್ ಸರ್ಕಲ್, ಪಾಲಿಟೆಕ್ನಿಕ್ ಕಾಲೇಜು ಸರ್ಕಲ್‌ಗಳಲ್ಲಿ ಪ್ರವಾಸಿಗರನ್ನು ಆಕರ್ಷಿಸಲು ಪೌರಾಣಿಕ, ಐತಿಹಾಸಿಕ ಮತ್ತು ಪ್ರಾಕೃತಿಕ ಹಿನ್ನಲೆಯಲ್ಲಿ ನಿರ್ಮಾಣ ಮತ್ತು ಸೌಂದರ್ಯೀಕರಣ ಕಾಮಗಾರಿ. **(ಸರ್ಕಾರದ ತಿದ್ದುಪಡಿ ಆದೇಶ ಸಂಖ್ಯೆ: TOR/200/TDP/2019, ದಿ:** 31/12/2019) | 130.00 | ಕೆಆರ್‌ಐಡಿಎಲ್ | 97.50 |

(ರೂ.ಲಕ್ಷಗಳಲ್ಲಿ)

| ಕ್ರ ಸಂ. | ಕಾಮಗಾರಿಯ ಹೆಸರು | ಅಂದಾಜು ಮೊತ್ತ | ಅನುಷ್ಠಾನ ಸಂಸ್ಥೆ | ಈವರೆಗೂ ಬಿಡುಗಡೆ ಮಾಡಿರುವ ಅನುದಾನ |
|---|---|---|---|---|
| 1 | 2 | 3 | 4 | 5 |
| 48 | ಚಿಕ್ಕಮಗಳೂರು ತಾ. ಹಿರೆಕೊಳಲೆಕೆರೆಯನ್ನು ಸಮಗ್ರವನ್ನಾಗಿ ರೂಪಿಸುವ ಕಾಮಗಾರಿ (ಮುಂದುವರೆದ ಕಾಮಗಾರಿ). | 118.00 | ಕೆಆರ್‌ಐಡಿಎಲ್ | 88.50 |
| 49 | ಚಿಕ್ಕಮಗಳೂರು ತಾ. ಮೂಗ್ತಿಹಳ್ಳಿ ಕೆರೆ ಅಭಿವೃದ್ಧಿಪಡಿಸಿ ಪ್ರವಾಸಿ ತಾಣವನ್ನಾಗಿ ರೂಪಿಸುವ ಕಾಮಗಾರಿ. (ಮುಂದುವರೆದ ಕಾಮಗಾರಿ). | 140.00 | ಕೆಆರ್‌ಐಡಿಎಲ್ | 105.00 |
| 50 | ದೇವಿರಮ್ಮ ದೇವಸ್ಥಾನ ಬೆಟ್ಟದಲ್ಲಿ ಸುರಕ್ಷತಾ ಕಾಮಗಾರಿಗಳು ಮತ್ತು ರಸ್ತೆ ಅಭಿವೃದ್ಧಿ. | 200.00 | ಕೆಆರ್‌ಐಡಿಎಲ್ | 150.00 |
| 51 | ಚಿಕ್ಕಮಗಳೂರು ತಾಲ್ಲೂಕು ಮಲ್ಲೇನಹಳ್ಳಿ ಗ್ರಾ.ಪಂ ಬಿಂಡಿಗಾ ದೇವಿರಮ್ಮ ಬೆಟ್ಟದ ರಸ್ತೆ ಅಭಿವೃದ್ಧಿ. | 100.00 | ಕೆಟಿಐಎಲ್/ ಕೆ.ಆರ್.ಐ.ಡಿ.ಎಲ್ | 75.00 |
| 52 | ಚಿಕ್ಕಮಗಳೂರು ತಾಲ್ಲೂಕು ಮಲ್ಲೇನಹಳ್ಳಿ ಗ್ರಾ.ಪಂ ಕುಮಾರಗಿರಿಯಲ್ಲಿ ಮೂಲ ಸೌಲಭ್ಯ | 100.00 | ಕೆಟಿಐಎಲ್/ ಕೆ.ಆರ್.ಐ.ಡಿ.ಎಲ್ | 75.00 |
| 53 | ಹಿರೇಮಗಳೂರು ಕೋದಂಡರಾಮ ಸ್ವಾಮಿ ದೇವಸ್ಥಾನದ ಬಳಿ ಶೌಚಾಲಯ ನಿರ್ಮಾಣ. | 15.00 | ಕೆಟಿಐಎಲ್/ ಕೆ.ಆರ್.ಐ.ಡಿ.ಎಲ್ | 15.00 |
| | **ಚಿಕ್ಕಮಗಳೂರು ತಾಲ್ಲೂಕು ಒಟ್ಟು** | 4103.00 | | 2828.17 |
| | **ಕೊಪ್ಪ ತಾಲ್ಲೂಕು** | | | |
| 54 | ಚಿಕ್ಕಮಗಳೂರು ಜಿಲ್ಲೆ ಕೊಪ್ಪ ತಾಲ್ಲೂಕು, ಮೇಗುಂದ ಹೋಬಳಿಯ ಪಂಚಮಿಕಲ್ಲು ಎಂಬ ಗುಡ್ಡದ ಮೇಲಿರುವಂತಹ ಜೈನ ಪುಣ್ಯಕ್ಷೇತ್ರದಲ್ಲಿ ತಡೆಗೋಡೆ/ಹಾಗೂ ಮೂಲಸೌಲಭ್ಯಗಳ ಅಭಿವೃದ್ಧಿ | 50.00 | ಕೆಆರ್‌ಐಡಿಎಲ್ | 37.50 |
| | **ಕೊಪ್ಪ ತಾಲ್ಲೂಕು ಒಟ್ಟು** | 50.00 | | 37.50 |
| | **ಕಡೂರು ತಾಲ್ಲೂಕು** | | | |
| 55 | ಕಡೂರು ತಾಲ್ಲೂಕು, ನಿಡಘಟ್ಟ ಆಂಜನೇಯ ಸ್ವಾಮಿ ದೇವಸ್ಥಾನ ಹತ್ತಿರ ಯಾತ್ರಿನಿವಾಸ/ಸಮುದಾಯ ಭವನ ನಿರ್ಮಾಣ. | 50.00 | ನಿರ್ಮಿತಿ ಕೇಂದ್ರ | 25.00 |
| 56 | ಶ್ರೀ ಹೇಮಗಿರಿ ಮಲ್ಲಿಕಾರ್ಜುನಸ್ವಾಮಿ ಕ್ಷೇತ್ರದಲ್ಲಿ ಯಾತ್ರಿನಿವಾಸ, ಪ್ರಸಾದ ನಿಲಯ ಹಾಗೂ ಮೂಲಭೂತ ಸೌಕರ್ಯ. | 175.00 | ನಿರ್ಮಿತಿ ಕೇಂದ್ರ | 87.50 |
| 57 | ಕಡೂರು ವಿಧಾನಸಭಾ ಕ್ಷೇತ್ರದ ಜಿ. ಯರದಕೆರೆ ಹಾಲೋಕಳಿ ರಂಗನಾಥಸ್ವಾಮಿ ಸುಕ್ಷೇತ್ರದಲ್ಲಿ ಯಾತ್ರಿನಿವಾಸ ನಿರ್ಮಾಣ. | 50.00 | ನಿರ್ಮಿತಿ ಕೇಂದ್ರ | 25.00 |

(ರೂ.ಲಕ್ಷಗಳಲ್ಲಿ)

| ಕ್ರ ಸಂ. | ಕಾಮಗಾರಿಯ ಹೆಸರು | ಅಂದಾಜು ಮೊತ್ತ | ಅನುಷ್ಠಾನ ಸಂಸ್ಥೆ | ಈವರೆಗೂ ಬಿಡುಗಡೆ ಮಾಡಿರುವ ಅನುದಾನ |
|---|---|---|---|---|
| 1 | 2 | 3 | 4 | 5 |
| 58 | ಕಡೂರು ತಾ. ಅಯ್ಯನಕೆರೆಗೆ ಮೂಲಭೂತ ಸೌಕರ್ಯ. | 200.00 | ನಿರ್ಮಿತಿ ಕೇಂದ್ರ | 100.00 |
| 59 | ಸಖರಾಯಪಟ್ಟಣದ ಶ್ರೀ ಶಕುನರಂಗನಾಥ ಸ್ವಾಮಿ ದೇವಸ್ಥಾನ (ಮುಜರಾಯಿ ವ್ಯಾಪ್ತಿ) ಮೂಲಭೂತ ಸೌಕರ್ಯ. | 150.00 | ಲೋಕೋಪಯೋಗಿ ಇಲಾಖೆ | 112.50 |
| 60 | ಕಡೂರು ನಗರದ ಯಳನಾಡು ಸಂಸ್ಥಾನಕ್ಕೆ ಯಾತ್ರಿನಿವಾಸ ನಿರ್ಮಾಣ. | 25.00 | ನಿರ್ಮಿತಿ ಕೇಂದ್ರ | 12.50 |
| 61 | ಕಡೂರು ತಾಲ್ಲೂಕು ಬಾಣೂರು ಬಿ.ಎಸ್. ರಸ್ತೆ ಯಿಂದ ಹೊಸಳ್ಳಿ ಮೂಲಕ ಹುಲಿಕೆರೆಗೆ ಸಂಪರ್ಕ ಕಲ್ಪಿಸುವ ರಸ್ತೆ ಅಭಿವೃದ್ಧಿ ಕಾಮಗಾರಿ. | 300.00 | ಲೋಕೋಪಯೋಗಿ ಇಲಾಖೆ | 225.00 |
| 62 | ಸಖರಾಯಪಟ್ಟಣ–ಕುಮಾರಗಿರಿ ರಸ್ತೆ ಅಭಿವೃದ್ಧಿ ಕಾಮಗಾರಿ. | 500.00 | ಲೋಕೋಪಯೋಗಿ ಇಲಾಖೆ | 375.00 |
| 63 | ಐತಿಹಾಸಿಕ ಮಹತ್ವದ ದೇವನೂರಿನಲ್ಲಿರುವ (ಪ್ರವಾಸಿಗರಿಗಾಗಿ ನಿರ್ಮಿಸುತ್ತಿರುವ) ಡಾರ್ಮಿಟರಿ ಮುಂದುವರೆದ ಕಾಮಗಾರಿ. | 25.00 | ನಿರ್ಮಿತಿ ಕೇಂದ್ರ | 12.50 |
| 64 | ಕಡೂರು ತಾಲ್ಲೂಕಿನ ನಿಡಘಟ್ಟದ ಬೀರಲಿಂಗೇಶ್ವರ ದೇವಸ್ಥಾನದಲ್ಲಿ (ಪ್ರವಾಸಿಗರಿಗಾಗಿ ನಿರ್ಮಿಸುತ್ತಿರುವ) ಡಾರ್ಮಿಟರಿ ಮುಂದುವರೆದ ಕಾಮಗಾರಿ. | 25.00 | ನಿರ್ಮಿತಿ ಕೇಂದ್ರ | 12.50 |
| 65 | ಕಡೂರು ತಾಲ್ಲುಕು ಕೆ.ಎಂ ರಸ್ತೆಯಿಂದ ಸಖರಾಯಪಟ್ಟಣ ರಂಗನಾಥ ದೇವಾಲಯ ರಸ್ತೆ ಅಭಿವೃದ್ಧಿ. | 200.00 | ಲೋಕೋಪಯೋಗಿ ಇಲಾಖೆ | 198.11 |
| 66 | ಕಡೂರು ತಾಲ್ಲೂಕು ಟಿ.ಬಿ. ಕಾವಲ್ ರಸ್ತೆಯಿಂದ ಚಟ್ನಳ್ಳಿ ಮಾರ್ಗ ನಿಡಘಟ್ಟದಲ್ಲಿರುವ ಶ್ರೀ ಆಂಜನೇಯಸ್ವಾಮಿ ದೇವಸ್ಥಾನ ರಸ್ತೆ ಅಭಿವೃದ್ಧಿ. | 400.00 | ಲೋಕೋಪಯೋಗಿ ಇಲಾಖೆ | 300.00 |
| 67 | ಕಡೂರು ತಾಲ್ಲೂಕಿನ ದೇವನೂರು ಶ್ರೀ ಲಕ್ಷ್ಮೀಕಾಂತ ದೇವಾಲಯ ಹಾಗೂ ಶ್ರೀ ರುದ್ರಭಟ್ಟನ ಜನ್ಮಸ್ಥಳದ ಹತ್ತಿರ ಫುಡ್‌ಕೋರ್ಟ್ ಮತ್ತು ಸಾರ್ವಜನಿಕ 4 ಶೌಚಾಲಯಗಳ ನಿರ್ಮಾಣ. | 25.00 | ನಿರ್ಮಿತಿ ಕೇಂದ್ರ | 12.50 |
| 68 | ಕಡೂರು ಕ್ಷೇತ್ರದ ಮದಗದ ಕೆರೆಯ ವ್ಯಾಪ್ತಿಯಲ್ಲಿ ವಿವಿಧ ಪ್ರವಾಸಿ ಸೌಲಭ್ಯ ಕಾಮಗಾರಿಗಳು. | 105.00 | ಲೋಕೋಪಯೋಗಿ ಇಲಾಖೆ | 78.75 |
| 69 | ಕಡೂರು ತಾಲ್ಲೂಕಿನ ಯಗಟಿ ಮಲ್ಲಿಕಾರ್ಜುನ ದೇವಸ್ಥಾನ ಬಳಿ ಶೌಚಾಲಯ ಹಾಗೂ ಇತರೆ ಮೂಲ ಸೌಲಭ್ಯ ಅಭಿವೃದ್ಧಿ. ತಿದ್ದುಪಡಿ ಆದೇಶ (ಸರ್ಕಾರದ ಆದೇಶ ಸಂಖ್ಯೆ: TOR/23/TDP/2019, ದಿನಾಂಕ: 02/07/2019. | 50.00 | ಕೆಟಿಐಎಲ್/ ಕೆ.ಆರ್.ಐ.ಡಿ.ಎಲ್ | 37.50 |
|  | **ಕಡೂರು ತಾಲ್ಲೂಕು ಒಟ್ಟು** | 2280.00 |  | 1614.36 |

(ರೂ.ಲಕ್ಷಗಳಲ್ಲಿ)

| ಕ್ರ ಸಂ. | ಕಾಮಗಾರಿಯ ಹೆಸರು | ಅಂದಾಜು ಮೊತ್ತ | ಅನುಷ್ಠಾನ ಸಂಸ್ಥೆ | ಈವರೆಗೂ ಬಿಡುಗಡೆ ಮಾಡಿರುವ ಅನುದಾನ |
|---|---|---|---|---|
| 1 | 2 | 3 | 4 | 5 |
| | **ಶೃಂಗೇರಿ ತಾಲ್ಲೂಕು** | | | |
| 70 | ಶೃಂಗೇರಿ ವಿಧಾನಸಭಾ ಕ್ಷೇತ್ರದ ಶ್ರೀ ಜಗದ್ಗುರು ರಂಭಾಪುರಿ ವೀರಸಿಂಹಾಸನ ಮಹಾಸಂಸ್ಥಾನ ಪೀಠ ಇಲ್ಲಿ ಯಾತ್ರಿನಿವಾಸ ಕಟ್ಟಡ ಕಾಮಗಾರಿ. | 100.00 | ನಿರ್ಮಿತಿ ಕೇಂದ್ರ | 50.00 |
| 71 | ಚಿಕ್ಕಮಗಳೂರು ಜಿಲ್ಲೆಯ ಶೃಂಗೇರಿ ಕ್ಷೇತ್ರದ ಕೊಳಲೆಗ್ರಾಮ-ಬಿಳಾಲುಕೊಪ್ಪ ದಿಂದ ಎನ್.ಆರ್.ಪುರ-ಶಿವಮೊಗ್ಗ ಮುಖ್ಯ ರಸ್ತೆವರೆಗಿನ ರಸ್ತೆ ಅಭಿವೃದ್ಧಿ. ಯೋಗಭವನ | 50.00 | ಕೆಆರ್ಐಡಿಎಲ್ | 37.50 |
| | **ಶೃಂಗೇರಿ ತಾಲ್ಲೂಕು ಒಟ್ಟು** | **150.00** | | 87.50 |
| | **ಚಿಕ್ಕಮಗಳೂರು ಜಿಲ್ಲೆ ಒಟ್ಟು :** | **10817.10** | | **8030.18** |

# ಅನುಬಂಧ-2

## ಚಿಕ್ಕಮಗಳೂರು ಜಿಲ್ಲೆಯ ಪ್ರವಾಸಿ ತಾಣಗಳ ಅಭಿವೃದ್ಧಿಗಾಗಿ ಕರ್ನಾಟಕ ಟೂರಿಸಂ ವಿಷನ್ ಗ್ರೂಪ್ ಶಿಫಾರಸ್ಸುಗಳಡಿ ಕೈಗೆತ್ತಿಕೊಂಡಿರುವ ಕಾಮಗಾರಿಗಳ ಹಾಗೂ ಅವುಗಳಿಗೆ ಬಿಡುಗಡೆ ಮಾಡಿರುವ ಅನುದಾನದ ತಾಲ್ಲೂಕುವಾರು ವಿವರ

(ರೂ.ಲಕ್ಷಗಳಲ್ಲಿ)

| ಕ್ರ. ಸಂ | ಯೋಜನೆಯ ವಿವರ | ಅಂದಾಜು ಮೊತ್ತ | ಅನುಷ್ಠಾನ ಸಂಸ್ಥೆ/ ಗುತ್ತಿಗೆ ದಾರರು | ಈವರೆಗೂ ಬಿಡುಗಡೆ ಮಾಡಿರುವ ಅನುದಾನ |
|---|---|---|---|---|
| 1 | 2 | 4 | 5 | 6 |
| | **ಚಿಕ್ಕಮಗಳೂರು ತಾಲ್ಲೂಕು** | | | |
| 1 | ಚಿಕ್ಕಮಗಳೂರು ನಗರದ ಹೊರವಲಯದಲ್ಲಿರುವ ಮಹಾತ್ಮ ಗಾಂಧಿ ಉದ್ಯಾನವನ/ರತ್ನಗಿರಿ ಬೋರೆಯಲ್ಲಿ ವಿವಿಧ ಪ್ರವಾಸಿ ಸೌಲಭ್ಯಗಳ ಅಭಿವೃದ್ಧಿ. | 600.00 | ಲೋಕೋಪಯೋಗಿ ಇಲಾಖೆ | 450.00 |
| 2 | ಚಿಕ್ಕಮಗಳೂರು ತಾಲ್ಲೂಕಿನ ಖಾಂಡ್ಯದಲ್ಲಿರುವ ವಿವಿಧ ಪ್ರವಾಸಿ ತಾಣಗಳ ಅಭಿವೃದ್ಧಿ ಮತ್ತು ಯಾತ್ರಿನಿವಾಸ ನಿರ್ಮಾಣ. | 100.00 | ನಿರ್ಮಿತಿ ಕೇಂದ್ರ | 75.00 |
| 3 | ಚಿಕ್ಕಮಗಳೂರು ತಾಲ್ಲುಕು ಮೂಡಿಗೆರೆ ಕ್ಷೇತ್ರದ ರಂಗನಬೆಟ್ಟ ಪ್ರವಾಸಿ ತಾಣವನ್ನು ಅಭಿವೃದ್ಧಿ ಪಡಿಸುವುದು. | 100.00 | ಕೆ.ಆರ್. ಐ.ಡಿ.ಎಲ್ | 88.00 |
| 4 | ಬೆಳವಾಡಿ ವೀರನಾರಾಯಣ ಸ್ವಾಮಿ ದೇವಸ್ಥಾನ ಹಾಗೂ ಉದ್ಭವ ಗಣಪತಿ ದೇವಸ್ಥಾನಕ್ಕೆ ಮೂಲಭೂತ ಸೌಕರ್ಯ ಕಲ್ಪಿಸಿ, ಪ್ರವಾಸಿ ತಾಣವನ್ನಾಗಿ ರೂಪಿಸುವುದು. | 100.00 | ಪುರಾತತ್ವ ಸಂಗ್ರಹಾಲಯ ಗಳ ಇಲಾಖೆ | 50.00 |
| 5 | ಚಿಕ್ಕಮಗಳೂರು ತಾಲ್ಲೂಕು ಹಿರೆಕೊಳಲೆಕೆರೆಯನ್ನು ಸಮಗ್ರವಾಗಿ ಅಭಿವೃದ್ಧಿಪಡಿಸಿ, ಪ್ರವಾಸಿ ತಾಣವನ್ನಾಗಿ ರೂಪಿಸುವುದು. | 150.00 | ಕೆ.ಆರ್. ಐ.ಡಿ.ಎಲ್ | 50.00 |
| 6 | ಮಾಣಿಕ್ಯಧಾರ ಫಾಲ್ಸ್‌ಗೆ ಮೂಲಭೂತ ಸೌಕರ್ಯ ಕಲ್ಪಿಸುವುದು ಮತ್ತು ರಸ್ತೆ ಅಭಿವೃದ್ಧಿ ಕಾಮಗಾರಿ. | 200.00 | ಲೋಕೋಪಯೋಗಿ ಇಲಾಖೆ | 150.00 |
| 7 | ಚಿಕ್ಕಮಗಳೂರು ನಗರದ ಎ.ಐ.ಟಿ. ವೃತ್ತದಿಂದ ಹಿರೇಮಗಳೂರು ವೃತ್ತದವರೆವಿಗೆ (ರಾಜ್ಯ ಹೆದ್ದಾರಿ 57ರ ವಿಸ್ತೃತ ಯೋಜನಾ ವರದಿ ಅನುಸಾರ 431 + 720 ರಿಂದ 435+000ವರೆಗೆ) ಒಟ್ಟು 3.28 ಕಿ.ಮೀ. ಉದ್ದದ ರಸ್ತೆ ಅಭಿವೃದ್ಧಿ | 2940.00 | ಮುಖ್ಯ ಅಭಿಯಂತರರು, ರಾಷ್ಟ್ರೀಯ ಹೆದ್ದಾರಿ, ಲೋ.ಬಂ. ಮತ್ತು ಒ.ಜ. ಇಲಾಖೆ, ಬೆಂಗಳೂರು | 1470.00 |
| 8 | ಚಿಕ್ಕಮಗಳೂರು ತಾಲ್ಲೂಕು ದೇವಗೊಂಡನಹಳ್ಳಿ-ಕಬ್ಬಿಗರ ಹಳ್ಳಿ-ಸಿಂದಿಗೆರೆ ಸಂಪರ್ಕ ರಸ್ತೆ ನಿರ್ಮಾಣ ಕಾಮಗಾರಿ (ಚಿಕ್ಕಮಗಳೂರು ನಗರದ ಕೋಟೆಕೆರೆಯನ್ನು ಸಮಗ್ರವಾಗಿ ಅಭಿವೃದ್ಧಿಪಡಿಸಿ, ಪ್ರವಾಸಿ ತಾಣವನ್ನಾಗಿ ರೂಪಿಸುವುದು ಕಾಮಗಾರಿ ಬದಲಾಗಿ ಮಂಜೂರಾಗಿದೆ.) | 150.00 | ಲೋಕೋಪಯೋಗಿ ಇಲಾಖೆ | 50.00 |
| | **ಚಿಕ್ಕಮಗಳೂರು ತಾಲ್ಲೂಕು ಒಟ್ಟು** | **4340.00** | | **2383.00** |



(ರೂ.ಲಕ್ಷಗಳಲ್ಲಿ)

| ಕ್ರ. ಸಂ | ಯೋಜನೆಯ ವಿವರ | ಅಂದಾಜು ಮೊತ್ತ | ಅನುಷ್ಠಾನ ಸಂಸ್ಥೆ/ ಗುತ್ತಿಗೆ ದಾರರು | ಈವರೆಗೂ ಬಿಡುಗಡೆ ಮಾಡಿರುವ ಅನುದಾನ |
|---|---|---|---|---|
| 1 | 2 | 4 | 5 | 6 |
| | **ಶೃಂಗೇರಿ ತಾಲ್ಲೂಕು** | | | |
| 9 | ಶೃಂಗೇರಿ ತಾಲ್ಲೂಕು ಸಿರಿಮನೆ ಫಾಲ್ಸ್ ಪ್ರವಾಸಿ ತಾಣ ಅಭಿವೃದ್ಧಿ | 100.00 | ಉಪ ಅರಣ್ಯ ಸಂರಕ್ಷಣಾಧಿ ಕಾರಿಗಳು, ಕೊಪ್ಪ ವಿಭಾಗ, ಕೊಪ್ಪ | 50.00 |
| | **ಶೃಂಗೇರಿ ತಾಲ್ಲೂಕು ಒಟ್ಟು** | **100.00** | | **50.00** |
| | **ಕಡೂರು ತಾಲ್ಲೂಕು** | | | |
| 10 | ಕಡೂರು ತಾಲ್ಲೂಕು ಗುಬ್ಬಿಹಳ್ಳಿ-ಬ್ರಹ್ಮಸಮುದ್ರ ಮುಖಾಂತರ ಕೆ.ಎಂ. ರಸ್ತೆಗೆ ಸಂಪರ್ಕ ಕಲ್ಪಿಸುವ ರಸ್ತೆ ನಿರ್ಮಾಣ ಕಾಮಗಾರಿ | 200.00 | ಲೋಕೋಪಯೋಗಿ ಇಲಾಖೆ | 67.00 |
| | **ಕಡೂರು ತಾಲ್ಲೂಕು ಒಟ್ಟು** | **200.00** | | **67.00** |
| | **ಚಿಕ್ಕಮಗಳೂರು ಜಿಲ್ಲೆಯ ಒಟ್ಟು** | **4640.00** | | **2500.00** |

# ಅನುಬಂಧ-3

## ಚಿಕ್ಕಮಗಳೂರು ಜಿಲ್ಲೆಯ ಕಡೂರು ತಾಲ್ಲೂಕಿನ ಪ್ರವಾಸಿ ತಾಣಗಳ ಅಭಿವೃದ್ಧಿಗಾಗಿ ಬಂಡವಾಳ ವೆಚ್ಚಗಳ ಅಡಿ ಕೈಗೆತ್ತಿಕೊಂಡಿರುವ ಕಾಮಗಾರಿಗಳ ಹಾಗೂ ಅವುಗಳಿಗೆ ಬಿಡುಗಡೆ ಮಾಡಿರುವ ಅನುದಾನದ ತಾಲ್ಲೂಕುವಾರು ವಿವರ

(ರೂ.ಲಕ್ಷಗಳಲ್ಲಿ)

| ಕ್ರ ಸಂ. | ಕಾಮಗಾರಿಯ ಹೆಸರು | ಅಂದಾಜು ಮೊತ್ತ | ಅನುಷ್ಠಾನ ಸಂಸ್ಥೆ | ಈವರೆಗೂ ಬಿಡುಗಡೆ ಮಾಡಿರುವ ಅನುದಾನ |
|---|---|---|---|---|
| 1 | 2 | 3 | 4 | 5 |
| | **ಕಡೂರು ತಾಲ್ಲೂಕು** | | | |
| 1 | ಕಡೂರು ತಾಲ್ಲೂಕು, ನಿಡಘಟ್ಟ ಆಂಜನೇಯ ಸ್ವಾಮಿ ದೇವಸ್ಥಾನ ಹತ್ತಿರ ಯಾತ್ರಿನಿವಾಸ/ಸಮುದಾಯ ಭವನ ನಿರ್ಮಾಣ. | 50.00 | ನಿರ್ಮಿತಿ ಕೇಂದ್ರ | 25.00 |
| 2 | ಶ್ರೀ ಹೇಮಗಿರಿ ಮಲ್ಲಿಕಾರ್ಜುನಸ್ವಾಮಿ ಕ್ಷೇತ್ರದಲ್ಲಿ ಯಾತ್ರಿನಿವಾಸ, ಪ್ರಸಾದ ನಿಲಯ ಹಾಗೂ ಮೂಲಭೂತ ಸೌಕರ್ಯ. | 175.00 | ನಿರ್ಮಿತಿ ಕೇಂದ್ರ | 87.50 |
| 3 | ಕಡೂರು ವಿಧಾನಸಭಾ ಕ್ಷೇತ್ರದ ಜಿ. ಯರದಕೆರೆ ಹಾಲೋಕಳಿ ರಂಗನಾಥಸ್ವಾಮಿ ಸುಕ್ಷೇತ್ರದಲ್ಲಿ ಯಾತ್ರಿನಿವಾಸ ನಿರ್ಮಾಣ. | 50.00 | ನಿರ್ಮಿತಿ ಕೇಂದ್ರ | 25.00 |
| 4 | ಕಡೂರು ತಾ. ಅಯ್ಯನಕೆರೆಗೆ ಮೂಲಭೂತ ಸೌಕರ್ಯ. | 200.00 | ನಿರ್ಮಿತಿ ಕೇಂದ್ರ | 100.00 |
| 5 | ಸಖರಾಯಪಟ್ಟಣದ ಶ್ರೀ ಶಕುನರಂಗನಾಥ ಸ್ವಾಮಿ ದೇವಸ್ಥಾನ (ಮುಜರಾಯಿ ವ್ಯಾಪ್ತಿ) ಮೂಲಭೂತ ಸೌಕರ್ಯ. | 150.00 | ಲೋಕೋಪಯೋಗಿ ಇಲಾಖೆ | 112.50 |
| 6 | ಕಡೂರು ನಗರದ ಯಳನಾಡು ಸಂಸ್ಥಾನಕ್ಕೆ ಯಾತ್ರಿನಿವಾಸ ನಿರ್ಮಾಣ. | 25.00 | ನಿರ್ಮಿತಿ ಕೇಂದ್ರ | 12.50 |
| 7 | ಕಡೂರು ತಾಲ್ಲೂಕು ಬಾಣೂರು ಬಿ.ಎಸ್. ರಸ್ತೆಯಿಂದ ಹೊಸಳ್ಳಿ ಮೂಲಕ ಹುಲಿಕೆರೆಗೆ ಸಂಪರ್ಕ ಕಲ್ಪಿಸುವ ರಸ್ತೆ ಅಭಿವೃದ್ಧಿ ಕಾಮಗಾರಿ. | 300.00 | ಲೋಕೋಪಯೋಗಿ ಇಲಾಖೆ | 225.00 |
| 8 | ಸಖರಾಯಪಟ್ಟಣ-ಕುಮಾರಗಿರಿ ರಸ್ತೆ ಅಭಿವೃದ್ಧಿ ಕಾಮಗಾರಿ. | 500.00 | ಲೋಕೋಪಯೋಗಿ ಇಲಾಖೆ | 375.00 |
| 9 | ಐತಿಹಾಸಿಕ ಮಹತ್ವದ ದೇವನೂರಿನಲ್ಲಿರುವ (ಪ್ರವಾಸಿಗರಿಗಾಗಿ ನಿರ್ಮಿಸುತ್ತಿರುವ) ಡಾರ್ಮಿಟರಿ ಮುಂದುವರೆದ ಕಾಮಗಾರಿ. | 25.00 | ನಿರ್ಮಿತಿ ಕೇಂದ್ರ | 12.50 |
| 10 | ಕಡೂರು ತಾಲ್ಲೂಕಿನ ನಿಡಘಟ್ಟದ ಬೀರಲಿಂಗೇಶ್ವರ ದೇವಸ್ಥಾನದಲ್ಲಿ (ಪ್ರವಾಸಿಗರಿಗಾಗಿ ನಿರ್ಮಿಸುತ್ತಿರುವ) ಡಾರ್ಮಿಟರಿ ಮುಂದುವರೆದ ಕಾಮಗಾರಿ. | 25.00 | ನಿರ್ಮಿತಿ ಕೇಂದ್ರ | 12.50 |

(ರೂ.ಲಕ್ಷಗಳಲ್ಲಿ)

| ಕ್ರ ಸಂ. | ಕಾಮಗಾರಿಯ ಹೆಸರು | ಅಂದಾಜು ಮೊತ್ತ | ಅನುಷ್ಠಾನ ಸಂಸ್ಥೆ | ಈವರೆಗೂ ಬಿಡುಗಡೆ ಮಾಡಿರುವ ಅನುದಾನ |
|---|---|---|---|---|
| 1 | 2 | 3 | 4 | 5 |
| 11 | ಕಡೂರು ತಾಲ್ಲುಕು ಕೆ.ಎಂ ರಸ್ತೆಯಿಂದ ಸಖರಾಯಪಟ್ಟಣ ರಂಗನಾಥ ದೇವಾಲಯ ರಸ್ತೆ ಅಭಿವೃದ್ಧಿ. | 200.00 | ಲೋಕೋಪಯೋಗಿ ಇಲಾಖೆ | 198.11 |
| 12 | ಕಡೂರು ತಾಲ್ಲೂಕು ಟಿ.ಬಿ. ಕಾವಲ್ ರಸ್ತೆಯಿಂದ ಚಟ್ನಳ್ಳಿ ಮಾರ್ಗ ನಿಡಘಟ್ಟದಲ್ಲಿರುವ ಶ್ರೀ ಆಂಜನೇಯಸ್ವಾಮಿ ದೇವಸ್ಥಾನ ರಸ್ತೆ ಅಭಿವೃದ್ಧಿ. | 400.00 | ಲೋಕೋಪಯೋಗಿ ಇಲಾಖೆ | 300.00 |
| 13 | ಕಡೂರು ತಾಲ್ಲೂಕಿನ ದೇವನೂರು ಶ್ರೀ ಲಕ್ಷ್ಮೀಕಾಂತ ದೇವಾಲಯ ಹಾಗೂ ಶ್ರೀ ರುದ್ರಭಟ್ಟನ ಜನ್ಮಸ್ಥಳದ ಹತ್ತಿರ ಫುಡ್‌ಕೋರ್ಟ್ ಮತ್ತು ಸಾರ್ವಜನಿಕ 4 ಶೌಚಾಲಯಗಳ ನಿರ್ಮಾಣ | 25.00 | ನಿರ್ಮಿತಿ ಕೇಂದ್ರ | 12.50 |
| 14 | ಕಡೂರು ಕ್ಷೇತ್ರದ ಮದಗದ ಕೆರೆಯ ವ್ಯಾಪ್ತಿಯಲ್ಲಿ ವಿವಿಧ ಪ್ರವಾಸಿ ಸೌಲಭ್ಯ ಕಾಮಗಾರಿಗಳು. | 105.00 | ಲೋಕೋಪಯೋಗಿ ಇಲಾಖೆ | 78.75 |
| 15 | ಕಡೂರು ತಾಲ್ಲೂಕಿನ ಯಗಟಿ ಮಲ್ಲಿಕಾರ್ಜುನ ದೇವಸ್ಥಾನ ಬಳಿ ಶೌಚಾಲಯ ಹಾಗೂ ಇತರೆ ಮೂಲ ಸೌಲಭ್ಯ ಅಭಿವೃದ್ಧಿ. ತಿದ್ದುಪಡಿ ಆದೇಶ (ಸರ್ಕಾರದ ಆದೇಶ ಸಂಖ್ಯೆ: TOR/23/TDP/2019, ದಿನಾಂಕ: 02/07/2019. | 50.00 | ಕೆಟಿಐಎಲ್/ ಕೆ.ಆರ್.ಐ.ಡಿ.ಎಲ್ | 37.50 |
| 16 | ಕಡೂರು ತಾಲ್ಲೂಕು ಗುಬ್ಬಿಹಳ್ಳಿ-ಬ್ರಹ್ಮಸಮುದ್ರ ಮುಖಾಂತರ ಕೆ.ಎಂ.ರಸ್ತೆಗೆ ಸಂಪರ್ಕ ಕಲ್ಪಿಸುವ ರಸ್ತೆ ನಿಮಾಣ ಕಾಮಗಾರಿ | 200.00 | ಲೋಕೋಪಯೋಗಿ ಇಲಾಖೆ | 67.00 |
| | ಕಡೂರು ತಾಲ್ಲೂಕು ಒಟ್ಟು | 2480.00 | | 1681.36 |



**ಕರ್ನಾಟಕ ಸರ್ಕಾರ**

ಸಂ:ಹೆಚ್‌ಡಿ 446 ಎಸ್‌ಎಸ್‌ಟಿ 2020

ಕರ್ನಾಟಕ ಸರ್ಕಾರದ ಸಚಿವಾಲಯ
ವಿಧಾನ ಸೌಧ
ಬೆಂಗಳೂರು, ದಿನಾಂಕ:08.12.2020

108

U/S
08/12/2020

**ಇವರಿಂದ:-**
ಸರ್ಕಾರದ ಹೆಚ್ಚುವರಿ ಮುಖ್ಯ ಕಾರ್ಯದರ್ಶಿಗಳು,
ಒಳಾಡಳಿತ ಇಲಾಖೆ.

**ಇವರಿಗೆ:-**
ಕಾರ್ಯದರ್ಶಿ,
ಕರ್ನಾಟಕ ವಿಧಾನ ಸಭೆ
ವಿಧಾನ ಸೌಧ,
ಬೆಂಗಳೂರು.

ಮಾನ್ಯರೇ,

**ವಿಷಯ:-** ಮಾನ್ಯ ವಿಧಾನ ಸಭೆ ಸದಸ್ಯರಾದ ಶ್ರೀ ರಾಜೇಗೌಡ ಟಿ.ಡಿ. (ಶೃಂಗೇರಿ) ರವರ ಚುಕ್ಕೆಗುರುತಿಲ್ಲದ ಪ್ರಶ್ನೆ ಸಂಖ್ಯೆ:282ಕ್ಕೆ ಉತ್ತರ ಒದಗಿಸುವ ಬಗ್ಗೆ.

**ಉಲ್ಲೇಖ:-** ತಮ್ಮ ಪತ್ರ ಸಂ:ಪ್ರಶಾವಿಸ/15ನೇವಿಸ/8ಅ/ಪ್ರಸಂ.282/2020, ದಿನಾಂಕ:30.11.2020.

-- -- --

ಮೇಲ್ಕಂಡ ವಿಷಯ ಹಾಗೂ ಉಲ್ಲೇಖಕ್ಕೆ ಸಂಬಂಧಿಸಿದಂತೆ, ಮಾನ್ಯ ವಿಧಾನ ಸಭೆ ಸದಸ್ಯರಾದ ಶ್ರೀ ರಾಜೇಗೌಡ ಟಿ.ಡಿ. (ಶೃಂಗೇರಿ) ರವರ ಚುಕ್ಕೆಗುರುತಿಲ್ಲದ ಪ್ರಶ್ನೆ ಸಂಖ್ಯೆ:282ಕ್ಕೆ ಉತ್ತರದ 25 ಪ್ರತಿಗಳನ್ನು ಈ ಪತ್ರದೊಂದಿಗೆ ಲಗತ್ತಿಸಿ ಕಳುಹಿಸಲು ನಿರ್ದೇಶಿತಳಾಗಿದ್ದೇನೆ.

ತಮ್ಮ ವಿಶ್ವಾಸಿ

M.R. Shobha

(ಎಂ.ಆರ್.ಶೋಭಾ)
ಸರ್ಕಾರದ ಅಧೀನ ಕಾರ್ಯದರ್ಶಿ
ಒಳಾಡಳಿತ ಇಲಾಖೆ, (ಕಾನೂನು ಮತ್ತು ಸುವ್ಯವಸ್ಥೆ)
☎2203 3254, e-mail:uslo-home@karnataka.gov.in

**ಪ್ರತಿ:**

1) ಮಾನ್ಯ ಗೃಹ ಸಚಿವರ ಆಪ್ತ ಕಾರ್ಯದರ್ಶಿಯವರಿಗೆ
2) ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ/ಕಾರ್ಯದರ್ಶಿ(ಪಿಸಿಎಎಸ್)ರವರ ಆಪ್ತ ಕಾರ್ಯದರ್ಶಿಗಳು, ಒಳಾಡಳಿತ ಇಲಾಖೆ
3) ಸರ್ಕಾರದ ಜಂಟಿ ಕಾರ್ಯದರ್ಶಿ(ಕಾನೂನು & ಸುವ್ಯವಸ್ಥೆ) ಹಾಗೂ (ಸಮನ್ವಯ) ರವರ ಆಪ್ತ ಸಹಾಯಕರು, ಒಳಾಡಳಿತ ಇಲಾಖೆ.
4) ಸರ್ಕಾರದ ಅಧೀನ ಕಾರ್ಯದರ್ಶಿ(ಸಮನ್ವಯ) ಒಳಾಡಳಿತ ಇಲಾಖೆ.

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 282
ಸದಸ್ಯರ ಹೆಸರು : ಶ್ರೀ ರಾಜೇಗೌಡ ಟಿ.ಡಿ.(ಶೃಂಗೇರಿ)
ಉತ್ತರಿಸಬೇಕಾದ ದಿನಾಂಕ : 08-12-2020
ಉತ್ತರಿಸುವ ಸಚಿವರು : ಗೃಹಸಚಿವರು.

| ಕ್ರ.ಸ | ವಿಷಯ | ಉತ್ತರ |
|---|---|---|
| ಅ) | ರಾಜ್ಯದಲ್ಲಿ ಆನ್‌ಲೈನ್ ಹೆಸರಿನಲ್ಲಿ ಅವ್ಯಾಹತವಾಗಿ ಹಣಕಟ್ಟಿ ಜೂಜು ಆಡುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ? (ವಿವರ ನೀಡುವುದು) | ರಾಜ್ಯದಲ್ಲಿ ಆನ್‌ಲೈನ್ ಮೂಲಕ ಹಣ ಕಟ್ಟಿ ಜೂಜಾಟ ಆಡುತ್ತಿದ್ದ ಬಗ್ಗೆ ಮಾಹಿತಿ ಸಂಗ್ರಹಣೆ ದಾಳಿ ನಡೆಸಿ ಪ್ರಕರಣ ದಾಖಲಿಸಲಾಗುತ್ತಿದ್ದು, 2018ರಲ್ಲಿ 21 ಪ್ರಕರಣಗಳು, 2019ರಲ್ಲಿ 53 ಪ್ರಕರಣಗಳು ಹಾಗೂ 2020ರಲ್ಲಿ 131 ಪ್ರಕರಣಗಳು ದಾಖಲಾಗಿರುತ್ತವೆ. |
| ಆ) | ಹಾಗಿದ್ದಲ್ಲಿ, ಜೂಜಿನ ವಹಿವಾಟು ಯಾವ ಮೊತ್ತದಲ್ಲಿ ನಡೆಯುತ್ತಿದೆಯೆಂದು ಸರ್ಕಾರದ ಗಮನಕ್ಕೆ ಬಂದಿದೆಯೇ; (ಮಾಹಿತಿ ಒದಗಿಸುವುದು) | ಆನ್‌ಲೈನ್ ಮೂಲಕ ಜೂಜಾಟ ವಹಿವಾಟು ನಡೆಯುತ್ತಿದ್ದು, ಜೂಜಾಟ ಆಡುತ್ತಿರುವವರ ವಿರುದ್ಧ ದಾಳಿ ನಡೆಸಿ ಪ್ರಕರಣ ದಾಖಲಿಸಲಾಗುತ್ತದೆ. |
| ಇ) | ಇಂತಹ ಜೂಜಿನಿಂದ ಅಡ್ಡ ಪರಿಣಾಮಗಳು ಉಂಟಾಗುತ್ತಿರುವುದರ ಬಗ್ಗೆ ಸರ್ಕಾರ ಯಾವ ಕಾನೂನಾತ್ಮಕ ಕ್ರಮಗಳನ್ನು ಜರುಗಿಸಲು ನಿರ್ಧರಿಸಿದೆ (ಮಾಹಿತಿ ನೀಡುವುದು) | ಆನ್‌ಲೈನ್ ಜೂಜಿನಿಂದ ಅಡ್ಡ ಪರಿಣಾಮಗಳು ಉಂಟಾಗುತ್ತಿರುವುದರ ಬಗ್ಗೆ ಸರ್ಕಾರ ಕೆಳಗಿನಂತೆ ಕಾನೂನಾತ್ಮಕ ಕ್ರಮಗಳನ್ನು ತೆಗೆದುಕೊಳ್ಳಲಾಗುತ್ತಿದೆ:-<br>➢ ರಾಜ್ಯದಲ್ಲಿ ಆನ್‌ಲೈನ್ ಜೂಜಾಟ ಮತ್ತು ಆನ್‌ಲೈನ್ ಸ್ಕಿಲ್ ಗೇಮ್ಸ್‌ಗಳನ್ನು ನಿಷೇಧಿಸುವ ಮತ್ತು ನಿಯಂತ್ರಿಸುವ ಕುರಿತಾಗಿ ಮಸೂದೆಯನ್ನು ಜಾರಿಗೆ ತರಲು ಕ್ರಮವಹಿಸಲಾಗುತ್ತಿದೆ.<br>➢ ಆನ್ ಲೈನ್ ಮೂಲಕ ಕ್ರಿಕೆಟ್ ಬೆಟ್ಟಿಂಗ್ ಜೂಜಾಟಕ್ಕೆ ಸಂಬಂಧಿಸಿದಂತೆ ಗುಪ್ತ ಮಾಹಿತಿ ಸಂಗ್ರಹಿಸಲಾಗುತ್ತಿದ್ದು, ಮಾಹಿತಿ ದೊರೆತಲ್ಲಿ ಅಂತಹ ಆರೋಪಿಗಳ ವಿರುದ್ಧ ಕಾನೂನು ಕ್ರಮ ಜರುಗಿಸಲಾಗುತ್ತಿದೆ.<br>➢ ಇಂತಹ ಜೂಜು ನಡೆಸುತ್ತಿರುವವರ ಮೇಲೆ ಸೂಕ್ಷ್ಮ ನಿಗಾವಹಿಸಿ ಕಾನೂನು ಪ್ರಕಾರ ಪ್ರಕರಣಗಳನ್ನು ದಾಖಲಿಸಿ ನಿರ್ದಾಕ್ಷಿಣ್ಯ ಕ್ರಮ ಕೈಕೊಂಡು ನ್ಯಾಯಾಲಯದ ವಿಚಾರಣೆಗೆ ಒಳಪಡಿಸಲಾಗುವುದು. |

|  |  |  |
|---|---|---|
|  |  | ➢ ಪದೇ ಪದೇ ಇಂತಹ ದಂಧೆಗಳಲ್ಲಿ ತೊಡಗಿರುವುದು ಕಂಡು ಬಂದಲ್ಲಿ ಆರೋಪಿತರ ವಿರುದ್ಧ ಗಡಿಪಾರು ಹಾಗೂ ಗೂಂಡಾ ಕಾಯ್ದೆ ಅಡಿಯಲ್ಲಿ ಕ್ರಮ ಕೈಗೊಳ್ಳಲಾಗುತ್ತಿದೆ.<br><br>➢ ಈ ಬಗ್ಗೆ ಜಿಲ್ಲೆಯ ಎಲ್ಲಾ ಠಾಣಾಧಿಕಾರಿಗಳಿಗೆ ಕಟ್ಟುನಿಟ್ಟಾಗಿ ಸೂಚನೆಗಳನ್ನು ನೀಡಿ ಸೂಕ್ತ ಕಾನೂನಿನ ಅಡಿ ಕ್ರಮ ಕೈಗೊಳ್ಳುವಂತೆ ಸೂಚಿಸಲಾಗಿದೆ.<br><br>➢ ಇಂತಹ ಜೂಜಾಟಗಳನ್ನು ತಡೆಗಟ್ಟಲು ಜಿಲ್ಲೆಯ ಎಲ್ಲಾ ಪೊಲೀಸ್ ಅಧಿಕಾರಿಗಳು ಮತ್ತು ಸಿಬ್ಬಂದಿಯವರು ತಮ್ಮ ವ್ಯಾಪ್ತಿಯಲ್ಲಿ ಮಾಹಿತಿಯನ್ನು ಸಂಗ್ರಹಿಸುತ್ತಿದ್ದು, ಇಂತಹ ಕಾನೂನುಬಾಹಿರ ಚಟುವಟಿಕೆಗಳಿಗೆ ಅವಕಾಶ ನೀಡದಂತೆ ಎಲ್ಲಾ ರೀತಿಯ ಮುಂಜಾಗ್ರತಾ ಕ್ರಮಗಳನ್ನು ಕೈಗೊಳ್ಳಲಾಗುತ್ತಿದೆ. |

**ಹೆಚ್‌ಡಿ 446 ಎಸ್‌ಎಸ್‌ಟಿ 2020**

(ಬಸವರಾಜ ಬೊಮ್ಮಾಯಿ)
ಗೃಹ ಸಚಿವರು



<u>ಕರ್ನಾಟಕ ಸರ್ಕಾರ</u>

ಸಂಖ್ಯೆ: ಜಸಂಇ 152 ಎಂಎಲ್‌ಎ 2020

ಕರ್ನಾಟಕ ಸರ್ಕಾರದ ಸಚಿವಾಲಯ.
ವಿಕಾಸಸೌಧ,
ಬೆಂಗಳೂರು, ದಿನಾಂಕ:07.12.2020.

ಇವರಿಂದ,

ಸರ್ಕಾರದ ಕಾರ್ಯದರ್ಶಿ,
ಜಲಸಂಪನ್ಮೂಲ ಇಲಾಖೆ,
ವಿಕಾಸಸೌಧ.

ಇವರಿಗೆ,

ಕಾರ್ಯದರ್ಶಿಗಳು,
ಕರ್ನಾಟಕ ವಿಧಾನ ಸಭೆ,
ವಿಧಾನ ಸೌಧ,
ಬೆಂಗಳೂರು.

ಮಾನ್ಯರೇ,

ವಿಷಯ:- ಮಾನ್ಯ ವಿಧಾನ ಸಭಾ ಸದಸ್ಯರಾದ ಶ್ರೀ **ಗಣೇಶ್ ಜೆ.ಎನ್.** (ಕಂಪ್ಲಿ) ಇವರ ಚುಕ್ಕೆ **ಗುರುತಿಲ್ಲದ ಪ್ರಶ್ನೆ ಸಂಖ್ಯೆ:283** ಕ್ಕೆ ಉತ್ತರ.

---***---

ಮಾನ್ಯ ವಿಧಾನ ಸಭಾ ಸದಸ್ಯರಾದ ಶ್ರೀ **ಗಣೇಶ್ ಜೆ.ಎನ್.** (ಕಂಪ್ಲಿ) ಇವರ ಚುಕ್ಕೆ **ಗುರುತಿಲ್ಲದ ಪ್ರಶ್ನೆ ಸಂಖ್ಯೆ:283** ಕ್ಕೆ ದಿನಾಂಕ:08.12.2020 ರಂದು ಮಾನ್ಯ ಜಲಸಂಪನ್ಮೂಲ ಸಚಿವರು ಉತ್ತರಿಸಬೇಕಾಗಿದ್ದು, ಸದರಿ ಪ್ರಶ್ನೆಗೆ ಉತ್ತರಗಳನ್ನು ಸಿದ್ಧಪಡಿಸಿ 25 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ ಕಳುಹಿಸಿಕೊಡಲಾಗಿದೆ.

ತಮ್ಮ ನಂಬುಗೆಯ,

(ಶ್ರೀಹರಿ ಎಸ್.ಆರ್)
ಸರ್ಕಾರದ ಅಧೀನ ಕಾರ್ಯದರ್ಶಿ (ತಾಂತ್ರಿಕ-1)
ಜಲಸಂಪನ್ಮೂಲ ಇಲಾಖೆ.

<u>ಪ್ರತಿಯನ್ನು:-</u>

1. ಮಾನ್ಯ ಜಲಸಂಪನ್ಮೂಲ ಸಚಿವರ ಆಪ್ತ ಕಾರ್ಯದರ್ಶಿಗಳು, ವಿಧಾನಸೌಧ, ಬೆಂಗಳೂರು.
2. ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಯವರ ಆಪ್ತ ಕಾರ್ಯದರ್ಶಿಗಳು, ಜಲಸಂಪನ್ಮೂಲ ಇಲಾಖೆ.
3. ಸರ್ಕಾರದ ಕಾರ್ಯದರ್ಶಿಯವರ ಆಪ್ತ ಕಾರ್ಯದರ್ಶಿಗಳು, ಜಲಸಂಪನ್ಮೂಲ ಇಲಾಖೆ.
4. ಸರ್ಕಾರದ ಹೆಚ್ಚುವರಿ ಕಾರ್ಯದರ್ಶಿಯವರ ಆಪ್ತ ಸಹಾಯಕರು, ಜಲಸಂಪನ್ಮೂಲ ಇಲಾಖೆ.
5. ಸರ್ಕಾರದ ಉಪ ಕಾರ್ಯದರ್ಶಿಯವರ (ಕೆ.ಬಿ.ಜೆ.ಎನ್.ಎಲ್) ಆಪ್ತ ಸಹಾಯಕರು, ಜಲಸಂಪನ್ಮೂಲ ಇಲಾಖೆ.
6. ಸರ್ಕಾರದ ಉಪ ಕಾರ್ಯದರ್ಶಿಯವರ ಆಪ್ತ ಕಾರ್ಯದರ್ಶಿ, (ಸೇವೆಗಳು) ಜಲಸಂಪನ್ಮೂಲ ಇಲಾಖೆ.
7. ವ್ಯವಸ್ಥಾಪಕ ನಿರ್ದೇಶಕರು, ಕ.ನೀ.ನಿ.ನಿ., ಕಾಫೀಬೋರ್ಡ್ ಕಟ್ಟಡ, ಬೆಂಗಳೂರು.

## ಕರ್ನಾಟಕ ವಿಧಾನಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 283
ಸದಸ್ಯರ ಹೆಸರು : ಶ್ರೀ ಗಣೇಶ್ ಜೆ.ಎನ್. (ಕಂಪ್ಲಿ)
ಉತ್ತರಿಸುವ ದಿನಾಂಕ : 08.12.2020
ಉತ್ತರಿಸುವ ಸಚಿವರು : ಮಾನ್ಯ ಜಲಸಂಪನ್ಮೂಲ ಸಚಿವರು

| ಕ್ರ ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಬಳ್ಳಾರಿ ಜಿಲ್ಲೆಯಲ್ಲಿ ತುಂಗಭದ್ರಾ ನಾಲೆಗೆ ಸಂಬಂಧಿಸಿದಂತೆ ಹೆಚ್.ಎಲ್.ಸಿ. ಮತ್ತು ಎಲ್.ಎಲ್.ಸಿ. ಕಾಲುವೆಗಳ ಆಧುನೀಕರಣವನ್ನು ಕೈಗೊಳ್ಳಲಾಗುತ್ತಿದೆಯೇ; | ಹೌದು. |
| ಆ) | ಹಾಗಿದ್ದಲ್ಲಿ, ಎಷ್ಟು ಕಿ.ಮೀ. ಕಾಲುವೆಯ ಆಧುನೀಕರಣ ನಡೆಯುತ್ತಿದೆ? (ಇದರ ಪೂರ್ಣ ವಿವರ ನೀಡುವುದು) | ಬಳ್ಳಾರಿ ಜಿಲ್ಲೆಯಲ್ಲಿ ತುಂಗಭದ್ರಾ ಬಲದಂಡೆ ಮೇಲ್ಮಟ್ಟದ ಕಾಲುವೆ ಹಾಗೂ ಎಲ್.ಎಲ್.ಸಿ. ಕಾಲುವೆಗಳ ಆಧುನೀಕರಣ ಕಾಮಗಾರಿಗಳನ್ನು ನಂ.1, ತುಂಗಭದ್ರಾ ಜಲಾಶಯ ವಿಭಾಗ, ಮುನಿರಾಬಾದ್ ಮತ್ತು ನಂ.6, ಕಾಲುವೆ ವಿಭಾಗ ಬಳ್ಳಾರಿ ಅಡಿಯಲ್ಲಿ ಕೈಗೊಳ್ಳಲಾಗುತ್ತಿದ್ದು, ವಿವರ ಕೆಳಕಂಡಂತಿದೆ.<br><br>**ನಂ.1, ತುಂಗಭದ್ರಾ ಜಲಾಶಯ ವಿಭಾಗ, ಮುನಿರಾಬಾದ್:**<br>ಸದರಿ ವಿಭಾಗದಡಿಯಲ್ಲಿ ಆರ್.ಬಿ.ಹೆಚ್.ಎಲ್.ಸಿ. ಮತ್ತು ಆರ್.ಬಿ.ಎಲ್.ಎಲ್.ಸಿ. ವಿತರಣಾ ಕಾಲುವೆ ಒಟ್ಟು ಉದ್ದ 66.11 ಕಿ.ಮೀ.ಯಿದ್ದು, ಈ ಪೈಕಿ 55.55 ಕಿ.ಮೀ. ಸಿ.ಸಿ. ಲೈನಿಂಗ್ ಕಾಮಗಾರಿಯು ಪೂರ್ಣಗೊಂಡಿರುತ್ತದೆ. ಬಾಕಿ 10.56 ಕಿ.ಮೀ. ಸಿ.ಸಿ. ಲೈನಿಂಗ್ ಕಾಮಗಾರಿಯು ಪ್ರಗತಿಯಲ್ಲಿರುತ್ತದೆ.<br><br>**ನಂ.6, ಕಾಲುವೆ ವಿಭಾಗ, ಬಳ್ಳಾರಿ:**<br>ಸದರಿ ವಿಭಾಗದಡಿಯಲ್ಲಿ ಬರುವ ತುಂಗಭದ್ರಾ ಬಲದಂಡೆ ಮೇಲ್ಮಟ್ಟದ ಕಾಲುವೆಗಳ ಆಧುನೀಕರಣ ಕಾಮಗಾರಿಯನ್ನು 02 ಪ್ಯಾಕೇಜ್‌ಗಳಲ್ಲಿ ಕೈಗೆತ್ತಿಕೊಳ್ಳಲಾಗಿದ್ದು, ವಿವರ ಕೆಳಗಿನಂತಿದೆ:<br>**ಪ್ಯಾಕೇಜ್–I:** ಈ ಕಾಮಗಾರಿಯಲ್ಲಿ ವಿತರಣಾ ಕಾಲುವೆ 7, 8, 9, 10, 11, 12 & 13 ರ ಒಟ್ಟು ಉದ್ದ 271.47 ಕಿ.ಮೀ. ಯಿದ್ದು, ಸಿ.ಸಿ. ಲೈನಿಂಗ್ ಕಾಮಗಾರಿ ಕೈಗೊಂಡು ಪೂರ್ಣಗೊಳಿಸಲಾಗಿದೆ.<br>**ಪ್ಯಾಕೇಜ್–II:** ಈ ಕಾಮಗಾರಿಯಲ್ಲಿ ವಿತರಣಾ ಕಾಲುವೆ 14, 14ಎ, 15, 16 ಮತ್ತು 16ಎ ರ ಒಟ್ಟು ಉದ್ದ 273.77 ಕಿ.ಮೀ. ಯಿದ್ದು, ಸಿ.ಸಿ. ಲೈನಿಂಗ್ ಕಾಮಗಾರಿ ಕೈಗೊಂಡು ಪೂರ್ಣಗೊಳಿಸಲಾಗಿದೆ. |

ಸಂಖ್ಯೆ:ಜಸಂಇ 152 ಎಂಎಲ್ಎ 2020

(ರಮೇಶ್ ಲ. ಜಾರಕಿಹೊಳಿ)
ಜಲಸಂಪನ್ಮೂಲ ಸಚಿವರು.

# ಕರ್ನಾಟಕ ಸರ್ಕಾರ

ಸಂಖ್ಯೆ:ಜಸಂಇ 150 ಎನ್‌ಎಲ್‌ಎ 2020

ಕರ್ನಾಟಕ ಸರ್ಕಾರದ ಸಚಿವಾಲಯ,
3ನೇ ಮಹಡಿ, ವಿಕಾಸ ಸೌಧ,
ಬೆಂಗಳೂರು, ದಿನಾಂಕ: 08/12/20 .

110

8/12/2020

ಇಂದ :

ಸರ್ಕಾರದ ಕಾರ್ಯದರ್ಶಿ,
ಜಲ ಸಂಪನ್ಮೂಲ ಇಲಾಖೆ.

ಇವರಿಗೆ :

ಕಾರ್ಯದರ್ಶಿಗಳು,
ಕರ್ನಾಟಕ ವಿಧಾನ ಸಭೆ / ~~ಪರಿಷತ್ತು~~,
ವಿಧಾನ ಸೌಧ, ಬೆಂಗಳೂರು.

ಮಾನ್ಯರೆ,

ವಿಷಯ: ಮಾನ್ಯ ವಿಧಾನ ಸಭಾ / ~~ಪರಿಷತ್ತಿನ~~ ಸದಸ್ಯರಾದ ಶ್ರೀ / ~~ಶ್ರೀಮತಿ~~ ರೇವಣ್ಣ. ಹೆಚ್. ಡಿ. ಇವರ ಚುಕ್ಕೆ ~~ಗುರುತಿನ~~ / ಗುರುತಿಲ್ಲದ ಪ್ರಶ್ನೆ ಸಂಖ್ಯೆ: 284 ಕ್ಕೆ ಉತ್ತರಗಳನ್ನು ಸಲ್ಲಿಸುವ ಬಗ್ಗೆ.

** ** **

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಮಾನ್ಯ ವಿಧಾನ ಸಭಾ / ~~ಪರಿಷತ್ತಿನ~~ ಸದಸ್ಯರಾದ ಶ್ರೀ / ~~ಶ್ರೀಮತಿ~~ ರೇವಣ್ಣ. ಹೆಚ್. ಡಿ. ಇವರ ಚುಕ್ಕೆ ~~ಗುರುತಿನ~~ / ಗುರುತಿಲ್ಲದ ಪ್ರಶ್ನೆ ಸಂಖ್ಯೆ: 284. ಕ್ಕೆ ಉತ್ತರದ 25 ಪ್ರತಿಗಳನ್ನು ಈ ಪತ್ರದೊಂದಿಗೆ ಲಗತ್ತಿಸಿ ಮುಂದಿನ ಸೂಕ್ತ ಕ್ರಮಕ್ಕಾಗಿ ತಮಗೆ ಕಳುಹಿಸಲು ಆದೇಶಿತನಾಗಿದ್ದೇನೆ.

ತಮ್ಮ ವಿಶ್ವಾಸಿ,

U. Gurh

ಶಾಖಾಧಿಕಾರಿ (ತಾಂತ್ರಿಕ–2),
ಜಲ ಸಂಪನ್ಮೂಲ ಇಲಾಖೆ.

# ಕರ್ನಾಟಕ ವಿಧಾನ ಸಭೆ

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 284
2. ಸದಸ್ಯರ ಹೆಸರು : ಶ್ರೀ ರೇವಣ್ಣ. ಹೆಚ್.ಡಿ.
3. ಉತ್ತರಿಸಬೇಕಾದ ದಿನಾಂಕ : 08-12-2020
4. ಉತ್ತರಿಸುವ ಸಚಿವರು : ಮಾನ್ಯ ಜಲಸಂಪನ್ಮೂಲ ಸಚಿವರು

| ಕ್ರ ಸಂ | ಪ್ರಶ್ನೆಗಳು | ಉತ್ತರಗಳು |
|---|---|---|
| ಅ | ಜುಲೈ 2019 ರಿಂದ ಈ ದಿನಾಂಕದವರೆಗೆ ಹೇಮಾವತಿ ಯೋಜನಾ ವಲಯ ಗೊರೂರು ವ್ಯಾಪ್ತಿಯಲ್ಲಿ ಬರುವ ವಿಭಾಗಗಳಿಗೆ ಹಣ ಭರವಸೆ ಪತ್ರವನ್ನು ವಿಭಾಗವಾರು ಬಿಡುಗಡೆ ಮಾಡಿರುವ ಸಂಪೂರ್ಣ ಮಾಹಿತಿಯನ್ನು ನೀಡುವುದು; | ಜುಲೈ 2019 ರಿಂದ ನವೆಂಬರ್ 2020ರ ಅಂತ್ಯದವರೆಗೆ ಹೇಮಾವತಿ ಯೋಜನಾ ವಲಯ, ಗೊರೂರು ವ್ಯಾಪ್ತಿಯಲ್ಲಿ ಬರುವ 8 ವಿಭಾಗಗಳ ಕಾಮಗಾರಿಗಳಿಗಾಗಿ ಹಣ ಭರವಸೆ ಪತ್ರವನ್ನು ವಿಭಾಗವಾರು ಬಿಡುಗಡೆ ಮಾಡಿದ ವಿವರಗಳು ಈ ಕೆಳಕಂಡಂತಿವೆ : (ರೂ. ಕೋಟಿಗಳಲ್ಲಿ) |

(ರೂ. ಕೋಟಿಗಳಲ್ಲಿ)

| ಕ್ರ ಸಂ | ವಿಭಾಗಗಳ ಹೆಸರು | ಜುಲೈ 2019 ರಿಂದ ನವೆಂಬರ್ 2020 ರವರೆಗೆ ಬಿಡುಗಡೆ ಮಾಡಿದ ಮೊತ್ತ |
|---|---|---|
| 1 | ಹೇಮಾವತಿ ಅಣೆಕಟ್ಟು ವಿಭಾಗ, ಗೊರೂರು | 175.13 |
| 2 | ನಂ.1, ಹೇಮಾವತಿ ಬಲಮೇಲ್ದಂಡೆ ನಾಲಾ ವಿಭಾಗ, ಗೊರೂರು | 227.49 |
| 3 | ಹೇಮಾವತಿ ಬಲದಂಡೆ ನಾಲಾ ವಿಭಾಗ, ಹೊಳೆನರಸೀಪುರ | 320.33 |
| 4 | 1ನೇ ಹೇಮಾವತಿ ಎಡದಂಡೆ ನಾಲಾ ವಿಭಾಗ, ಚನ್ನರಾಯಪಟ್ಟಣ | 620.03 |
| 5 | ಯಗಚಿ ಯೋಜನಾ ವಿಭಾಗ, ಬೇಲೂರು | 26.09 |
| 6 | ನಂ.3 ಹೇಮಾವತಿ ಎಡದಂಡೆ ನಾಲಾ ವಿಭಾಗ, ಕೃಷ್ಣರಾಜಪೇಟೆ | 51.07 |
| 7 | ನಂ.6 ಹೇಮಾವತಿ ಎಡದಂಡೆ ನಾಲಾ ವಿಭಾಗ, ಪಾಂಡವಪುರ | 37.59 |
| 8 | ನಂ.7 ಹೇಮಾವತಿ ಎಡದಂಡೆ ನಾಲಾ ವಿಭಾಗ, ನಾಗಮಂಗಲ | 7.81 |
| | ಒಟ್ಟು | **1465.54** |

| ಕ್ರ ಸಂ | ಪ್ರಶ್ನೆಗಳು | ಉತ್ತರಗಳು |
|---|---|---|
| ಆ | ಜುಲೈ 2019 ರಿಂದ ಈ ದಿನಾಂಕದವರೆಗೆ ಹೇಮಾವತಿ ಯೋಜನಾ ವಲಯ ಗೊರೂರು ವ್ಯಾಪ್ತಿಯಲ್ಲಿ ವಿಭಾಗ ಕಛೇರಿಗಳಿಂದ ಗುತ್ತಿಗೆದಾರರಿಗೆ ಹಣ ಪಾವತಿಸಿರುವ ವಿವರಗಳನ್ನು ನೀಡುವುದು; ವಿಭಾಗವಾರು ಮತ್ತು ಕಾಮಗಾರಿವಾರು ಗುತ್ತಿಗೆದಾರರಿಗೆ ಪಾವತಿಸಿರುವ ಬಿಲ್ಲುಗಳ ಸಂಪೂರ್ಣ ಮಾಹಿತಿ ನೀಡುವುದು; | ಹೇಮಾವತಿ ಯೋಜನಾ ವಲಯ, ಗೊರೂರು ವ್ಯಾಪ್ತಿಯಲ್ಲಿನ ರೂ.5.00 ಕೋಟಿಗಳಿಗೂ ಮೇಲ್ಪಟ್ಟ ವಿಭಾಗವಾರು ಪ್ರಮುಖ ಕಾಮಗಾರಿಗಳ ಗುತ್ತಿಗೆದಾರರಿಗೆ ಹಣ ಪಾವತಿಸಿರುವ ವಿವರಗಳನ್ನು ಅನುಬಂಧದಲ್ಲಿ ಲಗತ್ತಿಸಿದೆ.<br><br>ಜುಲೈ 2019 ರಿಂದ ನವೆಂಬರ್ 2020ರ ಅಂತ್ಯದವರೆಗೆ ಬಿಡುಗಡೆಯಾಗಿರುವ ರೂ.1465.54 ಕೋಟಿಗಳ ಪೈಕಿ ರೂ.989.44 ಕೋಟಿಗಳನ್ನು ರೂ.5.00 ಕೋಟಿಗಳಿಗೂ ಮೇಲ್ಪಟ್ಟ ಪ್ರಮುಖ ಕಾಮಗಾರಿಗಳಿಗೆ ಪಾವತಿಮಾಡಲಾಗಿರುತ್ತದೆ.<br><br>ಉಳಿಕೆ ರೂ.476.10 ಕೋಟಿಗಳನ್ನು ಎಸ್.ಸಿ.ಪಿ, ಟಿ.ಎಸ್.ಪಿ, ಹಾಗೂ ಇತರೆ ಮೂಲಭೂತ ಸೌಕರ್ಯಕಲ್ಪಿಸುವ ಕಾಮಗಾರಿಗಳು ಮತ್ತು ನಿರ್ವಹಣೆ ಕಾಮಗಾರಿಗಳಿಗಾಗಿ ಪಾವತಿ ಮಾಡಲಾಗಿದೆ. |

| ಕ್ರ ಸಂ | ಪ್ರಶ್ನೆಗಳು | ಉತ್ತರಗಳು |
| --- | --- | --- |
| ಇ | ಜುಲೈ 2019 ರಿಂದ ಈ ದಿನಾಂಕದವರೆಗೆ ಹೇಮಾವತಿ ಯೋಜನಾ ವಲಯ ಗೊರೂರು ವ್ಯಾಪ್ತಿಯಲ್ಲಿ ಬರುವ ವಿಭಾಗಳಿಗೆ ಹಣ ಭರವಸೆ ಪತ್ರ ನೀಡಲು ಆರ್ಥಿಕ ಇಲಾಖೆಯು ನಿಗಧಿಪಡಿಸಿರುವ ಮಾನದಂಡಗಳನ್ನು ಕಾವೇರಿ ನೀರಾವರಿ ನಿಗಮದಲ್ಲಿ ಪಾಲಿಸಲಾಗುತ್ತಿದೆಯೇ; ಪಾಲಿಸದೇ ಇದ್ದಲ್ಲಿ ಅಂತಹ ಅಧಿಕಾರಿಗಳ ವಿರುದ್ಧ ಸರ್ಕಾರ ಕೈಗೊಂಡಿರುವ ಕ್ರಮಗಳೇನು; | ಹಣ ಭರವಸೆ ಪತ್ರದ ಆದೇಶದಲ್ಲಿ ಬಿಡುಗಡೆಯಾದ ಅನುದಾನವನ್ನು ಅನುಮೋದಿತ ಯೋಜನೆಗಳಿಗೆ ಮಾತ್ರ ವಿನಿಯೋಗಿಸತಕ್ಕದ್ದು ಎಂಬ ಮಾನ ದಂಡವನ್ನು ವಿಧಿಸಿದ್ದು, ಅದರಂತೆ ಅನುಮೋದನೆಗೊಂಡ ಯೋಜನೆಗಳಿಗೆ ಮಾತ್ರ ಅನುದಾನವನ್ನು ಬಿಡುಗಡೆ ಮಾಡಲಾಗುತ್ತಿದೆ ಹಾಗೂ ಸದರಿ ಮಾನದಂಡವನ್ನು ಅನುಸರಿಸದೇ ಉಲ್ಲಂಘಿಸಿರುವ ಪ್ರಕರಣಗಳು ಯಾವುದೂ ಇರುವುದಿಲ್ಲವಾದ್ದರಿಂದ ಅಧಿಕಾರಿಗಳ ವಿರುದ್ಧ ಕ್ರಮ ಕೈಗೊಂಡಿರುವುದಿಲ್ಲ. |
| ಈ | ಏತ ನೀರಾವರಿ ಯೋಜನೆಗಳ ಕಾಮಗಾರಿಗಳನ್ನು ನಿರ್ವಹಿಸುತ್ತಿರುವ ಗುತ್ತಿಗೆದಾರರಿಗೆ ಹಣ ಪಾವತಿ ಮಾಡುವಾಗ ಕೇವಲ ಪೈಪುಗಳ ಸರಬರಾಜಿಗೆ ಮಾತ್ರವೇ ಪ್ರಪ್ರಥಮವಾಗಿ ಸಂಪೂರ್ಣ ಹಣ ಪಾವತಿ ಮಾಡಿ ಇನ್ನಿತರೆ ಅವಶ್ಯಕ ಕಾಮಗಾರಿಗಳಾದ ಜಾಕ್‌ವೆಲ್, ಪಂಪ್‌ಹೌಸ್ ಇತ್ಯಾದಿ ಕಾಮಗಾರಿಗಳನ್ನು ಗುತ್ತಿಗೆ ಕರಾರಿನ ನಿಗಧಿತ ಅವಧಿಯೊಳಗೆ ನಿರ್ವಹಿಸದೇ ವಿಳಂಬವಾಗಿ ಕಾರ್ಯಗತಗೊಳಿಸುತ್ತೀರುವ ಕಾಮಗಾರಿಗಳ ಸಂಪೂರ್ಣ ಮಾಹಿತಿ ನೀಡುವುದು? | ಏತ ನೀರಾವರಿ ಯೋಜನೆಗಳನ್ನು ಅನುಷ್ಠಾನ ಮಾಡಿದ ಗುತ್ತಿಗೆದಾರರಿಗೆ ಹಣ ಪಾವತಿ ಮಾಡುವಾಗ ಕೇವಲ ಪೈಪುಗಳ ಸರಬರಾಜಿಗೆ ಮಾತ್ರವೇ ಪ್ರಪ್ರಥಮವಾಗಿ ಹಣ ಪಾವತಿ ಮಾಡದೇ ಇನ್ನೀತರೇ ಅವಶ್ಯಕತೆ ಕಾಮಗಾರಿಗಳಾದ ಜಾಕ್‌ವೆಲ್, ಪಂಪ್‌ಹೌಸ್ ಇತ್ಯಾದಿಗಳ ಕಾಮಗಾರಿಗಳನ್ನು ಪೂರ್ಣಗೊಳಿಸಿದ್ದಲ್ಲಿ ಗುತ್ತಿಗೆ ಕರಾರಿನಂತೆ, ಆದ್ಯತೆ ಮೇರೆಗೆ ಬಿಲ್ಲು ಪಾವತಿಸುವ ಕ್ರಮವಹಿಸಲಾಗುತ್ತಿದ್ದು, ನಿರ್ವಹಿಸದೇ ವಿಳಂಬವಾಗಿ ಕಾರ್ಯಗತಗೊಳಿಸಿರುವ ಕಾಮಗಾರಿಗಳ ವಿವರ ಯಾವುದೂ ಇರುವುದಿಲ್ಲ. |

*ಸಂಖ್ಯೆ:ಜಸಂಇ 150 ಎನ್‌ಎಲ್‌ಎ 2020*

(ರಮೇಶ್ ಲ. ಜಾರಕಿಹೊಳಿ)
**ಜಲಸಂಪನ್ಮೂಲ ಸಚಿವರು**

## ಮಾನ್ಯ ವಿಧಾನ ಸಭಾ ಸದಸ್ಯರಾದ ಶ್ರೀ ರೇವಣ್ಣ. ಹೆಚ್.ಡಿ. ರವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 284 ಕ್ಕೆ ಅನುಬಂಧ

(ರೂ. ಕೋಟಿಗಳಲ್ಲಿ)

| ಕ್ರ ಸಂ | ವಿಭಾಗದ ಹೆಸರು | ಗುತ್ತಿಗೆದಾರರ ಹೆಸರು | ಪ್ರಮುಖ ಕಾಮಗಾರಿಯ ಹೆಸರು | ಕಾಮಗಾರಿಯ ಗುತ್ತಿಗೆ ಮೊತ್ತ | ಜುಲೈ 2019ರಿಂದ ನವೆಂಬರ್ 2020ರವರೆಗೆ ಪಾವತಿಸಿರುವ ಬಿಲ್ಲಿನ ಮೊತ್ತ |
|---|---|---|---|---|---|
| 1 | ಹೇಮಾವತಿ ಅಣೆಕಟ್ಟು ವಿಭಾಗ, ಗೊರೂರು | ಉದಯ ಶಿವಕುಮಾರ್ | 1) ಹೇಮಾವತಿ ನದಿಗೆ ಅಡ್ಡಲಾಗಿ ಸಿರಿಗಾವರ ಹತ್ತಿರ ಸೇತುವೆ ನಿಮಾಣ | 10.04 | 0.49 |
| | | ಪಿ.ಡಿ.ಆರ್. ಕನ್ಸ್‌ಟ್ರಕ್ಸನ್ ಲಿಮಿಟೆಡ್ | 2)ಕಾಮಸಮುದ್ರ ಶಾಖಾ ನಾಲೆ ಸರಪಳಿ: 5 ಕಿ.ಮೀ ನಿಂದ 35 ಕಿ.ಮೀವರೆಗೆ (ಯಗಚಿ ಎಡದಂಡೆ ಶಾಖಾ ನಾಲೆ) ಮಣ್ಣಿನ ಅಗೆತ ಸಿ.ಡಿ. ಕಾಮಗಾರಿಗಳ ನಿರ್ಮಾಣ ಹಾಗೂ ಸಿಮೆಂಟ್ ಕಾಂಕ್ರೀಟ್ ಒಳಗೊಂಡಂತೆ | 71.08 | 8.80 |
| | | ಎಂ.ವೈ. ಕಟ್ಟೀಮನಿ | 3) ಹೇಮಾವತಿ ಎಡದಂಡೆ ನಾಲೆಯ ಸರಪಳಿ 0.00 ಕಿ.ಮೀ ನಿಂದ 71.62 ಕಿ.ಮೀವರೆಗೆ ಮತ್ತು ಬಿ.ಎನ್.ಟಿ. ಅಪ್ರೋಚ್ ನಾಲೆ 0.00 ಕಿ.ಮೀ ಇಂದ 5.57 ಕಿ.ಮೀವರೆಗೆ ಆಧುನೀಕರಣ ಕಾಮಗಾರಿ. | 762.42 | 20.23 |
| 2 | ನಂ.1, ಹೇಮಾವತಿ ಬಲಮೇಲ್ದಂಡೆ ನಾಲಾ ವಿಭಾಗ, ಗೊರೂರು | ಅಮೃತ ಕನ್ಸ್‌ಟ್ರಕ್ಸನ್ ಪ್ರೈ. ಲಿ. ಬೆಂಗಳೂರು | 4) ಹೇಮಾವತಿ ನದಿಯಿಂದ ಅರಕಲಗೂಡು ತಾಲ್ಲೂಕಿನ ಗಂಗನಾಳು ಅಕ್ಕಪಕ್ಕದ 42 ಗ್ರಾಮಗಳಿಗೆ 88 ಕೆರೆಗಳಿಗೆ ಕುಡಿಯುವ ನೀರು ತುಂಬಿಸುವ ಯೋಜನೆ. | 33.48 | 0.05 |
| | | ಮೆ॥ ಎ.ಸಿ.ಪಿ.ಎಲ್–ಎಸ್.ಪಿ.ಎಂ.ಎಲ್. ಇನ್‌ಪ್ರಾ ಲಿ. ಬೆಂಗಳೂರು | 5) ಹೇಮಾವತಿ ನದಿಯಿಂದ ನೀರನ್ನು ಎತ್ತಿ ಬೇವಿನಹಳ್ಳಿಯಿಂದ ರಂಗೇನಹಳ್ಳಿ ಮತ್ತು ಇತರೆ 22 ಕೆರೆಗಳಿಗೆ ಕುಡಿಯುವ ನೀರು ತುಂಬಿಸುವ ಯೋಜನೆ. | 43.44 | 19.45 |
| | | ಮೆ॥ ಬಿ.ಎಸ್.ಆರ್. ಇನ್‌ಪ್ರಾಟೆಕ್ ಇಂಡಿಯಾ ಲಿ. ಬೆಂಗಳೂರು | 6) ಹೇಮಾವತಿ ಬಲಮೇಲ್ದಂಡೆ ನಾಲೆಯ ಸರಪಳಿ:0.00 ಕಿ.ಮೀ ನಿಂ 96.812 ಕಿ.ಮೀ ವರೆಗೆ ನಾಲಾ ಆಧುನೀಕರಣ ಕಾಮಗಾರಿ. | 379.55 | 292.13 |
| | | ಹೆಚ್.ಸಿ. ಉಮೇಶ | 7) ಕೆ.ಆರ್. ನಗರ ತಾಲ್ಲೂಕಿನ ಅಡಿಯಲ್ಲಿ ಬರುವ ಮುಕ್ಕನಹಳ್ಳಿ ಕೆರೆಯಿಂದ 24 ಕೆರೆಗಳಿಗೆ ಕುಡಿಯುವ ನೀರು ಯೋಜನೆ. | 6.00 | 5.54 |
| 3 | ಹೇಮಾವತಿ ಬಲದಂಡೆ ನಾಲಾ ವಿಭಾಗ, ಹೊಳೆನರಸೀಪುರ | ಮೆ॥ ಆಡು ಇನ್‌ಪ್ರಾ (ಶ್ರೀ ಅರುಣಕುಮಾರ್ ಡಿ. ಬಂಡಿ) | 8) ಹೊಳೆನರಸೀಪುರ ತಾಲ್ಲೂಕು ಮಾವಿನಕೆರೆ ಗ್ರಾಮದ ಸಮೀಪ ಹೇಮಾವತಿ ನದಿಯಿಂದ ನೀರನ್ನು ಎತ್ತಿ ಹಾಸನ ತಾಲ್ಲೂಕು ಕುಡಿಯುವ ನೀರಿಗಾಗಿ 160 ಕೆರೆಗಳಿಗೆ ನೀರು ತುಂಬಿಸುವ ಹಾಸನ ತಾಲ್ಲೂಕಿನ ದುದ್ದ, ಶಾಂತಿಗ್ರಾಮ ಹಾಗೂ ಹೊಳೆನರಸೀಪುರ ತಾಲ್ಲೂಕಿನ ಹಳೇಕೋಟೆ ಹೋಬಳಿಗಳಲ್ಲಿ ಬರುವ ಒಣಕೆರೆಗಳಿಗೆ ನೀರನ್ನು ತುಂಬಿಸುವ ಯೋಜನೆ | 359.33 | 80.50 |
| | | ಮೆ॥ ಶಂಕರ ನಾರಾಯಣ ಕನ್ಸ್‌ಟ್ರಕ್ಸನ್ ಪ್ರೈ.ಲಿ. | 9) ಹೊಳೆನರಸೀಪುರ ತಾಲ್ಲೂಕಿನ ಕಟ್ಟೆಬೆಳಗುಲಿ ಗ್ರಾಮದ ಸಮೀಪ ಶ್ರಿ ರಾಮದೇವರ ಅಣೆಕಟ್ಟೆಯ ಪುನರ್ ನಿರ್ಮಾಣ ಕಾಮಗಾರಿ | 128.70 | 55.19 |
| | | ಹೆಚ್.ಸಿ. ಉಮೇಶ್ | 10) ಹೊಳೆನರಸೀಪುರ ತಾಲ್ಲೂಕಿನ ಅಡಿಯಲ್ಲಿ ಬರುವ ಶ್ರೀರಾಮದೇವರ ನಾಲಾ ಅಚ್ಚುಕಟ್ಟು ಪ್ರದೇಶದಲ್ಲಿ ವಂಚಿತ ಅಚ್ಚುಕಟ್ಟು ಪ್ರದೇಶಗಳಿಗೆ ತಟ್ಟೇಕೆರೆ ಏತ ನೀರಾವರಿ ಯೋಜನೆಯ ಪುನರ್‌ಜೀವನ್ ಭರಿಸುವ ಕೆಲಸ ಒಂಟಿಗುಡ್ಡ ಏತನೀರಾವರಿ ಯೋಜನೆಯ ಪುನರ್‌ಜೀವನಗೊಳಿಸುವ ಕಾಮಗಾರಿ ಕಾಮಸಮುದ್ರ ಏತನೀರಾವರಿ ಯೋಜನೆಯ ಅಡಿಯಲ್ಲಿ ಬರುವ 13ನೇ ಕಿ.ಮೀನಲ್ಲಿ ಮುತ್ತಿಗೆ ಹಿರೇಹಳ್ಳಿ ಫೀಡರ್ ಕೆನಾಲ್ ನಿರ್ಮಾಣ ಕಾಮಗಾರಿ. | 11.84 | 6.41 |
| | | ಮೆ॥ ಸ್ಟಾರ್ ಇನಾಟೆಕ್ | 11) ಹೇಮಾವತಿ ಬಲದಂಡೆ ನಾಲಾ ಸರಪಳಿ 0.00 ಕಿ.ಮೀ.ನಿಂದ 92.104 ಕಿ.ಮೀ. ವರೆಗಿನ ಆಧುನೀಕರಣ ಕಾಮಗಾರಿ | 417.50 | 95.96 |
| 4 | ಯಗಚಿ ಯೋಜನಾ ವಿಭಾಗ, ಬೇಲೂರು | ಶ್ರೀನಿವಾಸ ಇಂಡಿಯಾ ಪ್ರೈ. ಲಿ. | 12) ಹಳೇಬೀಡು–ಮಾದೀಹಳ್ಳಿ ಏತ ನೀರಾವರಿಯಿಂದ ಕುಡಿಯುವ ನೀರಿಗಾಗಿ 39 ಕೆರೆಗಳನ್ನು ತುಂಬಿಸುವ ಕಾಮಗಾರಿ. | 11.65 | 0.00 |
| | | ಸಿ.ಎನ್. ಸೋಮಶೇಖರ್ | 13) ಕ್ಯಾತನಹಳ್ಳಿ ಮೊದಲನೇ ಹಂತದ ಏತ ನೀರಾವರಿ ಯೋಜನೆ | 11.40 | 0.00 |

|  |  | ಪಿಚ್‌ಲಾಲ್ ವೆಂಕಟೇಶ್ವರರಾವ್ | 14) ಕ್ಯಾತನಹಳ್ಳಿ ಏತ ನೀರಾವರಿ ಯೋಜನೆಯ 2ನೇ ಹಂತದ ಸಿ.ಡಿ. ಕಾಮಗಾರಿಗಳ ಮಣ್ಣ ಅಗೆತ ಕೆಲಸ ಮತ್ತು ಪಂಪ್ ಮತ್ತು ಮಿಷನರಿಗಳ ಎಲೆಕ್ಟ್ರಿಕಲ್ ಕಾಮಗಾರಿಗಳು | 8.09 | 0.53 |
|---|---|---|---|---|---|
| 5 | ನಂ.1, ಹೇಮಾವತಿ ಎಡದಂಡೆ ನಾಲಾ ವಿಭಾಗ, ಚನ್ನರಾಯಪಟ್ಟಣ | ಮೆ॥ ಶ್ರೀ ಶ್ರೀನಿವಾಸ ಕನ್‌ಸ್ಟ್ರಕ್ಷನ್ ಇಂಡಿಯಾ ಪ್ರೈ.ಲಿ. | 15) ಚನ್ನರಾಯಪಟ್ಟಣ ತಾಲ್ಲೂಕಿನ ಬಿ.ಎನ್.ಟಿ. ಅಪ್ರೋಚ್ ಏತ ನೀರಾವರಿ ಯೋಜನೆ ನುಗ್ಗೇಹಳ್ಳಿ ಹೋಬಳಿಯ ಕೆರೆಗಳಿಗೆ ನೀರನ್ನು ತುಂಬಿಸುವ ಕಾಮಗಾರಿ. | 6.15 | 0.00 |
|  |  | ಮೆ॥ ಎನ್.ಆರ್.ಸಿ.ಎಲ್. ಲಿಮಿಟೆಡ್ | 16) ಚನ್ನರಾಯಪಟ್ಟಣ ತಾಲ್ಲೂಕಿನ ಹಿರಿಸಾವೆ-ಶ್ರವಣಬೆಳಗುಳ ಹೋಬಳಿಯಲ್ಲಿ ಬರುವ ಕೆರೆಗಳಿಗೆ ಏತ ನೀರಾವರಿ ಮೂಲಕ ನೀರು ತುಂಬಿಸುವ ಕಾಮಗಾರಿ. | 25.37 | 4.53 |
|  |  | ಓಷನ್ ಕನ್‌ಸ್ಟ್ರಕ್ಷನ್ ಇಂಡಿಯಾ ಪ್ರೈ.ಲಿ. | 17) ಚನ್ನರಾಯಪಟ್ಟಣ ತಾಲ್ಲೂಕಿನ ಅಮಾನಿಕೆರೆಯಿಂದ 25 ಸಂಖ್ಯೆ ಕೆರೆಗಳಿಗೆ ನೀರು ತುಂಬಿಸುವ ಕಾಮಗಾರಿ. | 64.89 | 18.72 |
|  |  | ಅಮೃತ್ ಕನ್‌ಸ್ಟ್ರಕ್ಷನ್ ಪ್ರೈ.ಲಿ. & ಶ್ರೀ ಎಸ್. ನಾರಾಯಣರೆಡ್ಡಿ | 18) ಚನ್ನರಾಯಪಟ್ಟಣ ತಾಲ್ಲೂಕಿನ ಆನೆಕೆರೆ-ಶುಂಭುದೇವರ ಕೆರೆಯಿಂದ 26 ಕೆರೆಗಳಿಗೆ ನೀರು ತುಂಬಿಸುವ ಕಾಮಗಾರಿ. | 57.65 | 41.62 |
|  |  | Groma Infra Structure Ltd., | Augmentation ಚನ್ನರಾಯಪಟ್ಟಣ ತಾಲ್ಲೂಕಿನ ಆನೆಕೆರೆ-ಶಂಭುದೇವರ ಕೆರೆಗೆ ನೀರು ತುಂಬಿಸುವ ಕಾಮಗಾರಿ | 26.00 | 4.00 |
|  |  | ಮೆ॥ ಶ್ರೀ ಶ್ರೀನಿವಾಸ ಕನ್‌ಸ್ಟ್ರಕ್ಷನ್ ಇಂಡಿಯಾ ಪ್ರೈ.ಲಿ. ಬಳ್ಳಾರಿ | 19) ಚನ್ನರಾಯಪಟ್ಟಣ ತಾಲ್ಲೂಕಿನ ಬಾಗೂರು ಹೋಬಳಿಯ 19 ಕೆರೆಗಳಿಗೆ ನೀರು ತುಂಬಿಸುವ ಕಾಮಗಾರಿ. | 32.00 | 9.37 |
|  |  | ಎಂ.ವೈ. ಕಟ್ಟೀಮನಿ | 20) ಹೇಮಾವತಿ ಎಡದಂಡೆ ನಾಲೆಯ ಸರಪಳಿ 0.00 ಕಿ.ಮೀ ನಿಂದ 71.62 ಕಿ.ಮೀವರೆಗೆ ಮತ್ತು ಬಿ.ಎನ್.ಟಿ. ಅಪ್ರೋಚ್ ನಾಲೆ 0.00 ಕಿ.ಮೀ ಇಂದ 5.57 ಕಿ.ಮೀವರೆಗೆ ಆಧುನೀಕರಣ ಕಾಮಗಾರಿ. | 762.42 | 0.00 |
|  |  | ಎಂ.ವೈ. ಕಟ್ಟೀಮನಿ | 21) ಹೇಮಾವತಿ ಎಡದಂಡೆ 72.00 ಕಿ.ಮೀ. ನಿಂದ 212 ಕಿ.ಮೀವರೆಗೆ ನಾಲಾ ಆಧುನೀಕರಣ ಕಾಮಗಾರಿ. | 865.27 | 315.56 |
| 6 | ನಂ.3 ಹೇಮಾವತಿ ಎಡದಂಡೆ ನಾಲಾ ವಿಭಾಗ, ಕೃಷ್ಣರಾಜಪೇಟೆ. | ವೈ. ಪಿಚ್ಚೇಶ್ವರರಾವ್ (ಶ್ರೀ ಶ್ರೀನಿವಾಸ್ ಕನ್‌ಸ್ಟ್ರಕ್ಷನ್ ಇಂಡಿಯಾ ಪ್ರೈ.ಲಿ.) | 22) ಹೇಮಾವತಿ ನದಿಯಿಂದ ಗುಡ್ಡೇಹೊಸಹಳ್ಳಿ ಹತ್ತಿರ ನೀರನ್ನು ಎತ್ತಿ ಕೃಷ್ಣರಾಜಪೇಟೆ ಮತ್ತು ನಾಗಮಂಗಲ ತಾಲ್ಲೂಕಿನ ಕೆರೆಗಳಿಗೆ ನೀರು ತುಂಬಿಸುವ ಯೋಜನೆ. | 207.36 | 10.36 |
|  |  |  | **ಒಟ್ಟು :-** |  | **989.44** |

ಕರ್ನಾಟಕ ಸರ್ಕಾರ

ಸಂಖ್ಯೆ: 02 ಇಎಲ್‌ಕ್ಯೂ 2020

ಕರ್ನಾಟಕ ಸರ್ಕಾರದ ಸಚಿವಾಲಯ,
ವಿಧಾನ ಸೌಧ,
ಬೆಂಗಳೂರು, ದಿನಾಂಕ:07.12.2020

ಇಂದ:

ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ,
ಆರ್ಥಿಕ ಇಲಾಖೆ,
ಬೆಂಗಳೂರು.

ಇವರಿಗೆ:

ಕಾರ್ಯದರ್ಶಿ,
ಕರ್ನಾಟಕ ವಿಧಾನ ಸಭೆ,
ವಿಧಾನ ಸೌಧ,
ಬೆಂಗಳೂರು.

111
Q15
8/12/2020

ಮಾನ್ಯರೆ,

ವಿಷಯ: ಮಾನ್ಯ ವಿಧಾನ ಸಭಾ ಸದಸ್ಯರಾದ ಶ್ರೀ ರೇವಣ್ಣ ಹೆಚ್. ಡಿ (ಹೊಳೆನರಸೀಪುರ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 285ಕ್ಕೆ ಉತ್ತರ ಕಳುಹಿಸುವ ಕುರಿತು.

---

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಮಾನ್ಯ ವಿಧಾನ ಸಭಾ ಸದಸ್ಯರಾದ ಶ್ರೀ ರೇವಣ್ಣ ಹೆಚ್. ಡಿ (ಹೊಳೆನರಸೀಪುರ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 285ಕ್ಕೆ ಉತ್ತರವನ್ನು ತಯಾರಿಸಿ 25 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ ಕಳುಹಿಸಿಕೊಡಲು ನಿರ್ದೇಶಿತನಾಗಿದ್ದೇನೆ.

ತಮ್ಮ ವಿಶ್ವಾಸಿ,

7.12.20

(ಅಜಯ್ ಎಸ್. ಕೊರಡೆ)
ಶಾಖಾಧಿಕಾರಿ,
ಆರ್ಥಿಕ ಇಲಾಖೆ (ಅಬಕಾರಿ).

# ಕರ್ನಾಟಕ ವಿಧಾನಸಭೆ

| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 285 |
|---|---|
| ಮಾನ್ಯ ಸದಸ್ಯರ ಹೆಸರು | ಶ್ರೀ ರೇವಣ್ಣ ಹೆಚ್.ಡಿ (ಹೊಳೆನರಸೀಪುರ) |
| ಉತ್ತರಿಸಬೇಕಾದ ದಿನಾಂಕ | 08-12-2020 |
| ಉತ್ತರಿಸಬೇಕಾದವರು | ಅಬಕಾರಿ ಸಚಿವರು |

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದಲ್ಲಿ ಅಬಕಾರಿ ಇಲಾಖೆಯಿಂದ ಬಾರ್, ರೆಸ್ಟೋರೆಂಟ್ ಸಿಎಲ್.2, ಸಿಎಲ್.3 ಮತ್ತು ಇತರೆ ಲೈಸೆನ್ಸ್‌ಗಳನ್ನು ನೀಡಲು ಇರುವ ಮಾನದಂಡಗಳೇನು (ಸಂಪೂರ್ಣ ಮಾಹಿತಿ ನೀಡುವುದು) | ವಿವಿಧ ರೀತಿಯ ಪರವಾನಗಿಗಳನ್ನು ನೀಡುವಾಗ ಈ ಕೆಳಕಂಡ ನಿಯಮಗಳನ್ನು ಪಾಲಿಸಲಾಗುತ್ತಿದೆ.<br><br>1) **ಸಿಎಲ್-2, ಸಿಎಲ್-4, ಸಿಎಲ್-6ಎ, ಸಿಎಲ್-7, ಸಿಎಲ್-8, ಸಿಎಲ್-9 ಸನ್ನದುಗಳು:** ಕರ್ನಾಟಕ ಅಬಕಾರಿ (ದೇಶಿ ಮತ್ತು ವಿದೇಶಿ ಮದ್ಯ ಮಾರಾಟ) ನಿಯಮಗಳು 1968 ರಡಿಯಲ್ಲಿನ ನಿಯಮಗಳಲ್ಲಿ ಅಗತ್ಯವಾಗಿ ಕಲ್ಪಿಸಬೇಕಾಗಿರುವ ಮೂಲಭೂತ ಸೌಲಭ್ಯಗಳು ಮತ್ತು ಕರ್ನಾಟಕ ಅಬಕಾರಿ ಸನ್ನದುಗಳು (ಸನ್ನದುಗಳ ಸಾಮಾನ್ಯ ಷರತ್ತುಗಳು) ನಿಯಮಗಳು 1967 ರಲ್ಲಿನ ನಿಯಮಗಳಡಿ ರೂಪಿಸಿರುವ ನಿರ್ಬಂಧಗಳು. ನಿಯಮಗಳ ಪ್ರತಿಯನ್ನು **ಅನುಬಂಧ-1 ಮತ್ತು 2** ರಲ್ಲಿ ನೀಡಿದೆ.<br><br>2) **ಸಿಎಲ್-4, ಸಿಎಲ್-6ಎ, ಸಿಎಲ್-7, ಸಿಎಲ್-9 ಸನ್ನದುಗಳಿಗೆ ಹೊಂದಿಕೊಂಡಿರುವ ಆರ್‌ವಿಬಿ ಸನ್ನದುಗಳು:** ಕರ್ನಾಟಕ ಅಬಕಾರಿ ಕಾಯಿದೆ 1965 ಮತ್ತು ಕರ್ನಾಟಕ ಅಬಕಾರಿ (ಚಿಲ್ಲರೆಯಾಗಿ ಬಿಯರ್ ಅನ್ನು ಮಾರಾಟ ಮಾಡುವ ಗುತ್ತಿಗೆ) ನಿಯಮ 1976 ರಡಿಯಲ್ಲಿನ ನಿಯಮಗಳು ಮತ್ತು ಕರ್ನಾಟಕ ಅಬಕಾರಿ ಸನ್ನದುಗಳ ಅಗತ್ಯವಾಗಿ ಕಲ್ಪಿಸಬೇಕಾಗಿರುವ ಮೂಲಭೂತ ಸೌಲಭ್ಯಗಳು ಮತ್ತು ಕರ್ನಾಟಕ ಅಬಕಾರಿ (ಸನ್ನದುಗಳ ಸಾಮಾನ್ಯ ಷರತ್ತುಗಳು) ನಿಯಮಗಳು 1967 ರಲ್ಲಿನ ನಿಯಮಗಳಡಿ ರೂಪಿಸಿರುವ ನಿರ್ಬಂಧಗಳು. ನಿಯಮಗಳ ಪ್ರತಿಯನ್ನು **ಅನುಬಂಧ-3** ರಲ್ಲಿ ನೀಡಿದೆ.. |

...2

| | | |
|---|---|---|
| | | 3) **ಮೈಕ್ರೋಬ್ರಿವರಿ ಸನ್ನದುಗಳುಃ** ಕರ್ನಾಟಕ ಅಬಕಾರಿ ಕಾಯಿದೆ 1965 ಮತ್ತು ಕರ್ನಾಟಕ ಅಬಕಾರಿ (ಬ್ರೀವರಿ) (ತಿದ್ದುಪಡಿ) ನಿಯಮಗಳು, 2010 ರಡಿಯ ನಿಯಮಗಳು ಮತ್ತು ಅಗತ್ಯವಾಗಿ ಕಲ್ಪಿಸಬೇಕಾಗಿರುವ ಮೂಲಭೂತ ಸೌಲಭ್ಯಗಳು ಹಾಗೂ ಕರ್ನಾಟಕ ಅಬಕಾರಿ (ಸನ್ನದುಗಳ ಸಾಮಾನ್ಯ ಷರತ್ತುಗಳು) ನಿಯಮಗಳು, 1967 ರಲ್ಲಿನ ನಿಯಮಗಳಡಿ ರೂಪಿಸಿರುವ ನಿರ್ಬಂಧಗಳು. ನಿಯಮಗಳ ಪ್ರತಿಯನ್ನು **ಅನುಬಂಧ-4** ರಲ್ಲಿ ನೀಡಿದೆ.<br><br>4) **ವೈನ್ ಟಾವರಿನ್/ವೈನ್ ಬೋಟಿಕ್ ಸನ್ನದುಗಳು:** ಕರ್ನಾಟಕ ಅಬಕಾರಿ ಕಾಯಿದೆ 1965 ಮತ್ತು ಕರ್ನಾಟಕ ಅಬಕಾರಿ (ಚಿಲ್ಲರೆಯಾಗಿ ವೈನ್‌ನ್ನು ಮಾರಾಟ ಮಾಡುವ ಹಕ್ಕು) ನಿಯಮಗಳು 2008 ರಡಿಯಲ್ಲಿನ ನಿಯಮಗಳು, ಕರ್ನಾಟಕ ಅಬಕಾರಿ (ಸನ್ನದುಗಳ ಸಾಮಾನ್ಯ ಷರತ್ತುಗಳು) ನಿಯಮಗಳು, 1967 ರಲ್ಲಿನ ನಿಯಮಗಳಡಿ ರೂಪಿಸಿರುವ ನಿರ್ಬಂಧಗಳು. ನಿಯಮಗಳ ಪ್ರತಿಯನ್ನು **ಅನುಬಂಧ-5** ರಲ್ಲಿ ನೀಡಿದೆ.<br><br>ಮುಂದುವರೆದು, ಈ ಎಲ್ಲಾ ಸನ್ನದುಗಳನ್ನು ಮಂಜೂರು ಮಾಡುವಾಗ ಅರ್ಜಿದಾರರುಗಳು ಕರ್ನಾಟಕ ಅಬಕಾರಿ (ದೇಶೀ ಮತ್ತು ವಿದೇಶೀ ಮದ್ಯ ಮಾರಾಟ) ನಿಯಮಗಳು, 1968 ರ ನಿಯಮ 4(ಬಿ) ಪ್ರಕಾರ ಮತ್ತು ಕರ್ನಾಟಕ ಅಬಕಾರಿ (ಬ್ರಿವರಿ) ನಿಯಮಗಳು, 1967 ರ ನಿಯಮ 5(ಬಿ) ರನ್ವಯ ಅನರ್ಹರಾಗದಿರುವ ಬಗ್ಗೆ ಸ್ವಯಂಘೋಷಿತ ಮುಚ್ಚಳಿಕೆಯನ್ನು ಪಡೆಯಲಾಗುತ್ತದೆ. |
| ಆ) | ಈ ಲೈಸೆನ್ಸ್‌ಗಳನ್ನು ಮಂಜೂರು ಮಾಡುವ ಸಮಯದಲ್ಲಿ ಅಧಿಕಾರಿಗಳು ಈ ಮಾನದಂಡಗಳನ್ನು ಉಲ್ಲಂಘನೆ ಮಾಡಿ ಲೈಸೆನ್ಸ್ ಮಂಜೂರು ಮಾಡಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ಸಂಬಂಧಿಸಿದ ಅಧಿಕಾರಿಗಳ ವಿರುದ್ಧ ಯಾವ ಶಿಸ್ತಿನ ಕ್ರಮ ಜರುಗಿಸಲಾಗಿದೆ; (ಸಂಪೂರ್ಣ ಮಾಹಿತಿ ನೀಡುವುದು) | ಲೈಸೆನ್ಸ್‌ಗಳನ್ನು ಮಂಜೂರು ಮಾಡುವ ಸಮಯದಲ್ಲಿ ಮಾನದಂಡಗಳನ್ನು ಉಲ್ಲಂಘನೆ ಮಾಡಿ ಅಧಿಕಾರಿಗಳು ಲೈಸೆನ್ಸ್ ಮಂಜೂರು ಮಾಡಿರುವುದು ಇಲಾಖೆಯ ಗಮನಕ್ಕೆ ಬಂದಿರುತ್ತದೆ. ಸಂಬಂಧಿಸಿದ ಅಧಿಕಾರಿಗಳ ವಿರುದ್ಧ ಶಿಸ್ತು ಕ್ರಮ ಜರುಗಿಸಲಾಗಿದ್ದು, ವಿವರವನ್ನು **ಅನುಬಂಧ-6** ರಲ್ಲಿ ನೀಡಿದೆ. |

| | | |
|---|---|---|
| ಇ) | ರಾಜ್ಯದಲ್ಲಿ ಅಬಕಾರಿ ಇಲಾಖೆಯಿಂದ ಬಾರ್, ರೆಸ್ಟೋರೆಂಟ್, ಸಿಎಲ್.2, ಸಿಎಲ್.3 ಮತ್ತು ಇತರೆ ಲೈಸೆನ್ಸ್‌ಗಳನ್ನು ಮಂಜೂರು ಮಾಡುವ ಸಂದರ್ಭದಲ್ಲಿ ಮಾನದಂಡಗಳಾದ ರಾಷ್ಟ್ರೀಯ ಹೆದ್ದಾರಿ ಅಭಿವೃದ್ಧಿ ಪ್ರಾಧಿಕಾರ ಹಾಗೂ ರಾಷ್ಟ್ರೀಯ ಹೆದ್ದಾರಿ, ರಾಜ್ಯ ಹೆದ್ದಾರಿ, ಎಂ.ಡಿ.ಆರ್ ಹಾಗೂ ಶಾಲಾ/ಕಾಲೇಜುಗಳು, ಪ್ರಾರ್ಥನಾ ಮಂದಿರಗಳು, ಆಸ್ಪತ್ರೆಗಳಿಂದ ನಿಗಧಿಪಡಿಸಿರುವ ಅಂತರದಿಂದ ದೂರವಿರಬೇಕೆಂದು ಸೂಚಿಸಲಾಗಿರುವ ನಿಯಮಗಳನ್ನು ಉಲ್ಲಂಘಿಸಿರುವ ಪ್ರಕರಣಗಳೆಷ್ಟು; | 13 ಪ್ರಕರಣಗಳು. |
| ಈ) | ಇಂತಹ ಪ್ರಕರಣಗಳಲ್ಲಿ ನಿಯಮಗಳನ್ನು ಉಲ್ಲಂಘಿಸಿರುವವರ ವಿರುದ್ಧ ಯಾವ ರೀತಿ ಕ್ರಮ ಜರುಗಿಸಲಾಗಿದೆ; (ಕಳೆದ ಮೂರು ವರ್ಷಗಳ ಸಂಪೂರ್ಣ ಮಾಹಿತಿ ನೀಡುವುದು) | ನಿಯಮಗಳನ್ನು ಉಲ್ಲಂಘಿಸಿರುವ ಪ್ರಕರಣಗಳಲ್ಲಿ ಕೈಗೊಳ್ಳಲಾಗಿರುವ ಕ್ರಮದ ಬಗ್ಗೆ ಮಾಹಿತಿಯನ್ನು **ಅನುಬಂಧ-7**ರಲ್ಲಿ ನೀಡಿದೆ. |

ಆಇ 102 ಇಎಲ್‌ಕ್ಯೂ 2020

(ಹೆಚ್. ನಾಗೇಶ್)
ಅಬಕಾರಿ ಸಚಿವರು

(2) They shall apply to the sale of Indian liquor [1][x x x x x] and Foreign liquor.

(3) They shall come into force at once.

## CASE LAW

Public interest petition filed under Article 32 not entertainable as it is sought to enforce Directive Principles under Article 47.

The writ petition filed under Article 32 of the Constitution is that the policy of prohibition is not being implemented as enjoined by Article 47. The petition is not entertainable. Article 47 of the Constitution, which is part of Directive Principles of State Policy enjoins that the State shall regard the raising of level of the standard of living of its people and the improvement of public health as among its primary duties and, in particular, the State shall endeavour to bring about prohibition of the consumption except for medicinal purposes of intoxicating drinks and of drugs which are injurious to health. Article 47 as in Part IV of the Constitution which contains Directive Principles of State Policy. Article 37 enjoins that the provisions of this part shall not be enforceable by any Court, but the principles therein laid down are nevertheless fundamental in the governance of the country and it shall be the duty of the State to apply these principles in making laws. It has to be borne in mind that Article 32 of the Constitution gives the Supreme Court the power to enforce rights which are fundamental rights. Fundamental rights are justiciable, Directive Principles are not. Directive Principles are aimed at securing certain values or enforce certain attitudes in the law making and in the administration of law. Directive Principles cannot in the very nature of things be enforced in a Court of law. Whether a law should be made embodying the principles of Directive Principles depends on the legislative will of the legislation. Article 32 is not the machinery through which policy preferences or priorities are determined and Supreme Court is not the forum where the conflicting claims of policies or priorities should be debated. To make the State accept a particular policy, desirable and necessary as the policy might be is not the function of Article 32 of the Constitution. Article 32 is not the nest for all the bees in the bonnet of 'public spirited persons'. — *B. Krishna Bhat v Union of India,* (1990)3 SCC 65. [Articles 32 and 47]

To make the State accept a particular policy — Not the function of Article 32.

The petition under Article 32 is that the policy of prohibition is not being implemented as enjoined by Article 47 of the Constitution. Article 47 of the Constitution, which is part of our Directive Principles of State policy enjoins that the State shall regard the raising of the level of nutrition and the standard of living of its people and the improvement of public health as among its primary duties and, in particular, the State shall endeavour to bring about prohibition of the consumption except for medicinal purposes of intoxicating drinks and of drugs which are injurious to health. Article 47 is in Part IV of the Constitution which contains Directive Principles of the State Policy. Article 37 enjoins that the provisions of this part shall not be enforceable by any Court, but the principles therein laid down are nevertheless fundamental in the governance of the country and it shall be the duty of the State to apply these principles in making laws. It has to be borne in mind that Article 32 of the Constitution gives the Supreme Court the power to enforce rights which are fundamental rights. Fundamental rights are justiciable, directive principles are not. Directive principles are aimed at securing certain values or enforce certain attitudes in the law making and in the administration of law. Directive

1. The brackets and words "(other than arrack)" omitted by GSR 273, dated 3-8-1972, w.e.f. 4-8-1972.



principles cannot in the very nature of things be enforced in a Court of law. Whether a law should be made embodying the principles of directive principles depends on the legislative will of the legislation. Article 32 is not the machinery through which policy preferences or priorities are determined and this Court is not the forum where the conflicting claims of policies or priorities should be debated. To make the State accept a particular policy, desirable and necessary as the policy might be is not the function of Article 32 of the Constitution. Article 32 of the Constitution is not the nest for all the bees in the bonnet of 'public spirited persons'. — *B. Krishna Bhat v Union of India,* (1990)3 SCC 65. [Articles 32, 37 and 47 of the Constitution]

**2. Definitions.**—In these rules, unless the context otherwise requires.—

(a) "**Act**" means, the Karnataka Excise Act, 1965;

(b) "**Foreign liquor**" means liquor other than Indian liquor;

(c) "**Form**" means a form appended to these rules;

(d) "**Indian liquor**" means all liquor defined as Indian liquor in the Act, [1][x x x x x]

(e) "**Licence**" means a licence issued under these rules;

(f) "**Licensee**" means, a person to whom a licence is issued;

(g) "**Year**" means the year commencing on the first day of July.

**3. Licences.**—Licences for the vend of [2][Indian Liquor (other than arrack)] or Foreign liquor or both shall be of the following descriptions, namely.—

[3][(1) x x x x

(1-A) x x x x x.]

(2) **Retail off shop licences for vend of Indian liquor or Foreign or both not to be drunk on the premises.**—Under these licences granted in Form C.L. 2, the sale of liquor in sealed bottles to any person in a quantity less than 0.180 litres at a time is prohibited.

[4][(3) x x x x x.]

[5][(4) **Licence to Clubs.**—The Agent, Secretary or Manager or any other person entrusted with the management of the business of the club shall apply and obtain licence in Form CL-4 from the Deputy Commissioner.

**Explanation.**—For the purpose of this clause, a club means a body of persons registered under the Karnataka Societies Registration Act, 1960:]

[6][Provided that no such licence under this clause shall be granted by the Deputy Commissioner, unless the following conditions are satisfied.—

1. The words "other than arrack" omitted by GSR 273, dated 3-8-1972, w.e.f. 4-8-1972.
2. Substituted for the words "Indian Liquor" by GSR 273, dated 3-8-1972, w.e.f. 4-8-1972.
3. Clauses (1) and (1-A) omitted by Notification No. FD 06 PES 2006(7), dated 19-6-2006, w.e.f. 1-7-2006
4. Sub-rule (3) omitted by GSR 16, dated 6-2-1990, w.e.f. 6-2-1990.
5. Sub-rule (4) substituted by GSR 16, dated 6-2-1990, w.e.f. 6-2-1990.
6. Provisos inserted by Notification No. FD 18 PES 2002, dated 29-6-2002, w.e.f. 1-7-2002

